

IBHP ASTROLOGY SERIES

# ಜೈಮಿನಿ ಜ್ಯೋತಿಷ

ಬಿ. ವಿ. ರಾಮನ್

# ಜೈಮಿನಿ ಜ್ಯೋತಿಷ

ಬೆಂಗಳೂರು ವೆಂಕಟರಾಮನ್
ಸಂಪಾದಕ : 'ಅಸ್ಟ್ರಾಲಜಿಕಲ್ ಮ್ಯಾಗಜೀನ್'




ಐಬಿಎಚ್ ಪ್ರಕಾಶನ
ಗಾಂಧಿನಗರ, ಬೆಂಗಳೂರು 560 009

# ಕನ್ನಡ ಮುದ್ರಣಕ್ಕೆ ಮುನ್ನುಡಿ

ಜೈಮಿನಿ ಜ್ಯೋತಿಷವನ್ನು ಕುರಿತ ಗ್ರಂಥಗಳು ವಿರಳವಾಗಿವೆ. ಆಂಗ್ಲ ಭಾಷೆಯಲ್ಲಿ ನಾಲ್ಕಾರು ಇವೆ. ಆದರೆ ಕನ್ನಡದಲ್ಲಿ ಇಲ್ಲವೆಂದೇ ಹೇಳಬೇಕು. ಜೈಮಿನಿ ಜ್ಯೋತಿಷವು ಭಾರತೀಯ ಜ್ಯೋತಿಷ ವಾಙ್ಮಯದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಕಾರಣ, ಕನ್ನಡ ಓದುಗರ, ಜ್ಯೋತಿಷಾಭಿಮಾನಿಗಳ ಪ್ರಯೋಜನಾರ್ಥವಾಗಿ ಈ ಮುದ್ರಣವನ್ನು ಪ್ರಕಟಿಸುತ್ತಿದ್ದೇವೆ.

ಇಂಗ್ಲಿಷಿನಲ್ಲಿ **"ಸ್ಟಡೀಸ್ ಇನ್ ಜೈಮಿನಿ ಅಸ್ಟ್ರಾಲಜಿ"** ಎಂಬ ನಮ್ಮ ಗ್ರಂಥ ಈವರೆಗೆ ನಾಲ್ಕು ಮುದ್ರಣಗಳನ್ನು ಕಂಡಿದೆ. ಅಷ್ಟು ಹೆಚ್ಚಾಗಿ ಪ್ರಚಾರದಲ್ಲಿಲ್ಲವಾದರೂ ವಿಶಿಷ್ಟ ರೀತಿಯಲ್ಲಿ ಅನುಭವಸಿದ್ಧವಾದ ವೈಜ್ಞಾನಿಕ ಸ್ವರೂಪವುಳ್ಳ ಈ ಪುಸ್ತಕದ ಕನ್ನಡ ಅನುವಾದವನ್ನು ಈ ಮೂಲಕ ಕರ್ನಾಟಕದ ಓದುಗರಿಗೆ ಸಮರ್ಪಿಸುತ್ತಿದ್ದೇವೆ. ಕನ್ನಡ ಓದುಗರು ಇದನ್ನು ಆಧರಿಸುವುದಾದರೆ ನಮ್ಮ ಶ್ರಮ, ನಮ್ಮ ಉದ್ದೇಶ ಸಾರ್ಥಕವಾಗುವುದೆಂದು ನಾವು ಭಾವಿಸುತ್ತೇವೆ.

ಜೈಮಿನಿ ಜ್ಯೋತಿಷದ ವಿಶೇಷ ಲಕ್ಷಣವೆಂದರೆ ಆಯುರ್ದಾಯ ಮತ್ತು ದಶಾ ವಿಭಾಗ, ಇದರ ವೈಶಿಷ್ಟ್ಯವು ಸಂಶೋಧನಾ ಮನೋಭಾವನೆಯುಳ್ಳವರಿಗೆ ಹೇಗೋ ಅದೇ ರೀತಿಯಲ್ಲಿ ಪ್ರಯೋಗಪಟುಗಳಿಗೂ ಹೊಸಹೊಸ ರೀತಿಯಲ್ಲಿ ಹೊಸಹೊಸ ವಿಷಯ ವಿಧಾನಗಳನ್ನು ಒದಗಿಸಿಕೊಡುತ್ತದೆ.

ಜ್ಯೋತಿಷ ಪಂಡಿತರೂ ಜ್ಞಾನಾರ್ಥಿಗಳೂ ಈ ಕನ್ನಡ ಮುದ್ರಣವನ್ನು ಕೂಡ ನಮ್ಮ ಇತರೇ ಪುಸ್ತಕಗಳನ್ನು ಸ್ವಾಗತಿಸಿರುವಂತೆ ಸ್ವಾಗತಿಸುತ್ತಾರೆಂದು ಆಶಿಸುತ್ತೇವೆ.

ಬೆಂಗಳೂರು
23-5-1979

**ಬಿ. ವಿ. ರಾಮನ್**

# ಮುನ್ನುಡಿ

ಇಪ್ಪತ್ತು ವರ್ಷಗಳಿಗೂ ಹಿಂದೆ ನಾನಿನ್ನೂ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ, ನನ್ನ ನಿವಾಸದ ಹತ್ತಿರವಿದ್ದ ಕೇರಳದ ಬ್ರಾಹ್ಮಣ ಜ್ಯೋತಿಷಿಯೊಬ್ಬರು ಜೈಮಿನಿ ಜ್ಯೋತಿಷದಲ್ಲಿ ನನಗೆ ಆಸಕ್ತಿಯನ್ನು ಕೆರಳಿಸಿದರು. ನನ್ನ ಜಾತಕದ ನಾಲ್ಕನೆಯ ಮನೆಯನ್ನು ಕುರಿತು ಅವರು ಸೂತ್ರಗಳನ್ನು ಆಧರಿಸಿ ಹೇಳುತ್ತ ಮಾಡಿದ ವಿಶ್ಲೇಷಣೆ ನನ್ನನ್ನು ವಿಸ್ಮಯಗೊಳಿಸಿತ್ತು. ಆಗ ಅವರು ಜೈಮಿನಿ ಸೂತ್ರಗಳ ಮೂರು ನಾಲ್ಕನೆಯ ಅಧ್ಯಾಯಗಳು ನಷ್ಟವಾಗಿವೆಯೆಂದೂ ಅಚ್ಚಿನಲ್ಲಾಗಲೀ ಹಸ್ತಾಕ್ಷರದಲ್ಲಾಗಲೀ ಅವು ದೊರಕುತ್ತಿಲ್ಲವೆಂದೂ ತಿಳಿಸಿದರು. 1936 ನೆಯ ವರ್ಷದ ಸುಮಾರಿನಲ್ಲಿ ನನ್ನ ಅಡ್ವೊಕೇಟ್ ಸ್ನೇಹಿತರೊಬ್ಬರು ನನಗೆ ಕನ್ನಡ ಲಿಪಿಯಲ್ಲಿದ್ದ ಜೈಮಿನಿ ಸೂತ್ರಗಳ ಪುಸ್ತಕವನ್ನು ಕೊಟ್ಟರು ; ಅವರಲ್ಲಿ ಮೂರು ನಾಲ್ಕನೆಯ ಅಧ್ಯಾಯಗಳ ಮೂಲ ಸೂತ್ರಗಳೂ ಇದ್ದವು. ಕೇರಳದ ಜ್ಯೋತಿಷಿ ನನಗೆ ಉಪಯುಕ್ತವಾಗುವಂತೆ ಮೂರು ನಾಲ್ಕನೆಯ ಅಧ್ಯಾಯಗಳನ್ನು ವ್ಯಾಖ್ಯಾನಮಾಡಿ ತಿಳಿಯ ಹೇಳಿದರು ; ಅದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ತರುವಾಯ ಅವರು ತಮ್ಮ ವಸತಿಯನ್ನು ಬದಲಾಯಿಸಿದರು, ಅವರ ಸಂಪರ್ಕ ನನಗೆ ತಪ್ಪಿಹೋಯಿತು. ಅವತ್ತಿನಿಂದ ನನಗೆ ಜೈಮಿನಿಯಲ್ಲಿ ಆಸಕ್ತಿ ಬೆಳೆಯುತ್ತ ಬಂತು. ನಮ್ಮ ಪೂಜ್ಯ ತಾತಂದಿರಾದ ದಿವಂಗತ ಪ್ರೊ. ಬಿ. ಸೂರ್ಯನಾರಾಯಣ ರಾಯರ ಭೇಟಿಗಾಗಿ ಆಗಿಂದಾಗ್ಗೆ ಬರುತ್ತಿದ್ದ ಪಂಡಿತರ ಸಂಗಡ ನಾನು ಚರ್ಚೆ ನಡೆಸಿ ಈ ಬಗ್ಗೆ ಉಪಯುಕ್ತವಾದ ವಿಷಯಸಂಗ್ರಹವನ್ನು ಮಾಡಿಕೊಂಡೆನು.

ಜೈಮಿನಿ ಸೂತ್ರಗಳನ್ನು ಕುರಿತು ದೇವನಾಗರಿ, ಕನ್ನಡ, ತೆಲುಗು ಲಿಪಿಗಳಲ್ಲಿರುವ ಹಲವು ಪಾಠಾಂತರಗಳು ನನ್ನ ಬಳಿ ಇವೆ—ಇವುಗಳಲ್ಲಿ ಬಹುತೇಕ ನೀಲಕಂಠನ ಭಾಷ್ಯವನ್ನು ಒಳಗೊಂಡಿವೆ. ವಿದ್ವಜ್ಜನರ ಮುಂದಿಡುತ್ತಿರುವ ಈ ಪುಸ್ತಕವು ಕಳೆದ ನಲವತ್ತೈದು ವರ್ಷಗಳ ಕಾಲದಿಂದ

ನಾನು ಕೈಕೊಂಡ ಅಧ್ಯಯನವನ್ನು ಆಧರಿಸಿದ್ದು. ಬಹುಶಃ ಈ ಸೂತ್ರಗಳನ್ನು ಕುರಿತು ತಾತ್ವಿಕವಾಗಿ ವಿಶದೀಕರಿಸುವ ಪುಸ್ತಕಗಳು ಮತ್ತು ಈ ಜ್ಯೋತಿಷ ವಿಧಾನದಲ್ಲಿ ತಜ್ಞರಾದವರು ತುಂಬ ವಿರಳರಾಗಿರುವ ಕಾರಣದಿಂದಲೂ ಜೈಮಿನಿ ಜ್ಯೋತಿಷವು ಜನಜನಿತವಾಗಿಲ್ಲ. ಇದರ ಪರಿಣಾಮವಾಗಿ ಜೈಮಿನಿಯು ಪ್ರತಿಪಾದಿಸುವ ತತ್ವಗಳನ್ನು ವ್ಯಾವಹಾರಿಕವಾಗಿ ಜಾತಕಗಳಿಗೆ ಹಚ್ಚಿ ನೋಡುವಾಗ ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತವೆ ಎಂಬುದನ್ನು ಹೇಳುವುದಕ್ಕೆ ಸಾಧ್ಯವಾಗುವುದಿಲ್ಲ. ಆದರೂ ಕೂಡ, ಜೈಮಿನಿ ಹೇಳುವ ಭವಿಷ್ಯಾವಧಾನ ಕ್ರಮವನ್ನು ಸ್ಪಷ್ಟವಾಗಿ ಗ್ರಹಿಸಿದ್ದೇ ಆದರೆ, ಕಂಡಷ್ಟು ಕರಾರುವಾಕ್ಕಾಗಿ ಭವಿಷ್ಯ ನುಡಿಯಬಹುದು ಎಂಬ ಬಗ್ಗೆ ಯಾವ ಸಂಶಯವೂ ಇಲ್ಲ.

ಈ ಪ್ರದೀಪಿಕೆಯಲ್ಲಿ ಜೈಮಿನಿ ತತ್ವಗಳ ಪ್ರಮುಖ ಅಂಶಗಳನ್ನು ಅಥವಾ ಭಾವನೆಗಳನ್ನು ಸರಳವೂ ಅಡಕವೂ ಆದ ರೀತಿಯಲ್ಲಿ ನಿವೇದಿಸಲು ಮಾತ್ರ ಪ್ರಯತ್ನಿಸಿದ್ದೇನೆ. ಈವರೆಗೆ ಅಸ್ಪಷ್ಟವಾಗಿ ಉಳಿದುಕೊಂಡಿದ್ದ ದಶೆಗಳು, ಆಯುರ್ದಾಯ ಮುಂತಾದ ಜೈಮಿನಿ ಜ್ಯೋತಿಷ ಪ್ರಕರಣಗಳನ್ನು ಇಲ್ಲಿ ಸಮಗ್ರವಾಗಿ ವಿವರಿಸಿದೆ, ಮತ್ತು ಅವುಗಳ ಪ್ರಾಮುಖ್ಯವನ್ನು ತಿಳಿಯ ಹೇಳಿದೆ. ನನ್ನದು ಸ್ವತಂತ್ರ ಕೃತಿಯಲ್ಲ. ಆದರೆ ಭಾರತದಲ್ಲಿ ಮೊದಲ ಬಾರಿ ಜೈಮಿನಿ ಜ್ಯೋತಿಷವನ್ನು ಇಂಗ್ಲಿಷ್ ಭಾಷೆಯಲ್ಲಿ ಸೂಕ್ತವಾದ ಉದಾಹರಣೆಗಳನ್ನು ಕೊಟ್ಟು ವ್ಯಾಖ್ಯಾನ ಮಾಡುತ್ತಿದ್ದೇನೆಂದು ನಿವೇದಿಸುತ್ತೇನೆ.

ನನ್ನ ಈ ಕೃತಿಯಿಂದ ಜೈಮಿನಿ ಜ್ಯೋತಿಷದ ವಿಶದವಾದ ವ್ಯಾಸಂಗದಲ್ಲಿ ವಾಚಕರಿಗೆ ಆಸಕ್ತಿ ಕೆರಳುವಂತಾದರೆ ನನ್ನ ಪ್ರಯತ್ನವು ಸಾರ್ಥಕವಾಯಿತೆಂದು ನಾನು ಭಾವಿಸುತ್ತೇನೆ.

ಬೆಂಗಳೂರು
ವಿಜಯದಶಮಿ
20 ನೆಯ ಅಕ್ಟೋಬರ್ 1950

**ಬಿ. ವಿ. ರಾಮನ್**

# ಪರಿವಿಡಿ

# ಪೂರ್ವಭಾವಿ ವಿಚಾರ

## 1. ಜೈಮಿನಿ ಪರಾಶರಿ ಪದ್ಧತಿಗಳು

ಈ ಪ್ರದೀಪಿಕೆಗೆ ಆಧಾರವಾದ ಜೈಮಿನಿ ಜ್ಯೋತಿಷ ಪದ್ಧತಿಯು ಭಾರತದ ಆದ್ಯಂತ ಪ್ರಚಾರದಲ್ಲಿರುವ ಸಾಮಾನ್ಯವಾದ ಜ್ಯೋತಿಷ ಪದ್ಧತಿಗಿಂತ ನಿರ್ದಿಷ್ಟವಾದ ರೀತಿಯಲ್ಲಿ ಪ್ರತ್ಯೇಕವಾಗಿದೆ. ಆದರೆ ಜೈಮಿನಿ ಪರಾಶರಿ ಪದ್ಧತಿಗಳೆರಡೂ ಪೂರ್ತಿ ವಿಭಿನ್ನವಾದುವೆಂದು ಆಗಲಿ ಅಥವಾ ಅವೆರಡೂ ಸ್ಪಷ್ಟವಾಗಿ ಪ್ರತ್ಯೇಕವಾದವು ಎಂದಾಗಲಿ ಸಮರ್ಥಿಸಲಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ಜೈಮಿನಿಯು ಪರಾಶರ ಪ್ರಣೀತವಾದ ಜ್ಯೋತಿಷ ವಿಜ್ಞಾನದ ಸಾಮಾನ್ಯ ಲಕ್ಷಣಗಳಿಂದ ಉದ್ಭೂತವಾದ ಒಂದು ವಿಧಾನ ಮಾತ್ರ ಎಂದು ಭಾವಿಸುವುದು ಸಕಾರಣವೆನಿಸುತ್ತದೆ. ಏಕೆಂದರೆ ಪರಾಶರ, ವೃದ್ಧಯವನ ಇವರ ಕೃತಿಗಳಲ್ಲಿ ಜೈಮಿನಿಯು ಪ್ರಯೋಗಿಸುವ ವಿಶಿಷ್ಟವಾದ ನಿರ್ದಿಷ್ಟವಾದ ಕ್ರಮವನ್ನು ಕುರಿತು ಪದೇ ಪದೇ ಉಲ್ಲೇಖಗಳು ದೊರಕುತ್ತವೆ. ಉದಾಹರಣೆಗೆ, ಮೊದಲನೆಯ ಅಧ್ಯಾಯದ ಮೊದಲನೆ ಪಾದದ ಐದನೆಯ ಸೂತ್ರದಲ್ಲಿ ವೀಕ್ಷಿಸುವ ಅಥವಾ ನೋಡತಕ್ಕ ಗ್ರಹದಿಂದ ಚತುರ್ಥ, ದ್ವಿತೀಯ, ಏಕಾದಶ ಮನೆಗಳಲ್ಲಿರುವ ಗ್ರಹಗಳು ಅರ್ಗಳವನ್ನು ಉಂಟುಮಾಡುತ್ತವೆ ಎಂದು ಜೈಮಿನಿ ಹೇಳುತ್ತಾನೆ. ಪರಾಶರ ತನ್ನ ಹೋರಾಶಾಸ್ತ್ರದಲ್ಲಿ ಈ ಅಂಶವನ್ನು ಸಮರ್ಥಿಸುತ್ತಾನೆ. ಇದೇ ರೀತಿಯಲ್ಲಿ ಅರ್ಗಳಗಳಿಗೆ ಭಂಗಉಂಟಾಗುವ ಬಗೆಗೂ, ಕಾರಕಗಳ ನಿರ್ಣಯ, ಆರೂಢ ಲಗ್ನ, ಕಾರಕಾಂಶಗಳ ಫಲ, ಆಯುರ್ದಾಯ ನಿಷ್ಕರ್ಷೆ ಮುಂತಾದುವುಗಳ ಬಗೆಗೂ ಜೈಮಿನಿಯನ್ನು ಪರಾಶರ ವೃದ್ಧಯವನರು ಸಮರ್ಥಿಸುತ್ತಾರೇನೋ ಎನಿಸುತ್ತದೆ. ಇದರಿಂದ ಪರಾಶರ ವೃದ್ಧಯವನರು ಇತ್ತೀಚಿನ ಲೇಖಕರು ಎಂದು ನಿರ್ಣಯಮಾಡುವ ಚಂಚಲವುಂಟಾಗ

ಬಹುದು. ಅಂಥ ನಿರ್ಣಯವು ನಿರಾಧಾರವಾದೀತು ; ಏಕೆಂದರೆ ಪರಾಶರರು ವ್ಯಾಸರ ಜನಕರಾದ ಕಾರಣ ಜೈಮಿನಿಯ ತರುವಾಯ ಇದ್ದವರಾಗಲಾರರು. ಭಾರತದಲ್ಲಿ ಎಲ್ಲಾ ಜ್ಯೋತಿಷ ವಿದ್ಯೆಗೂ ಪರಾಶರರೇ ನಿಸ್ಸಂದೇಹವಾಗಿ ಮೂಲ. ಜೈಮಿನಿಯೂ ಪರಾಶರರ ಕೆಲವು ಅಂಶಗಳನ್ನು ಅರಿಸಿಕೊಂಡು ತನ್ನ ಪ್ರತಿಭೆಯಿಂದ ಅದಕ್ಕೊಂದು ಹೊಸ ರೂಪವನ್ನು ಕೊಟ್ಟಿರಬೇಕು. ಹೀಗೆ ಜೈಮಿನಿ ಬೆಳೆಸಿದ ಜ್ಯೋತಿಷ ವಿಧಾನವು ಜ್ಯೋತಿಷವರೇಣ್ಯರಿಗೆ ಬಹುತೇಕ ಪ್ರಿಯವಾಗಲಿಲ್ಲ. ಏಕೆಂದರೆ ಆತ ತನ್ನ ತತ್ವಗಳನ್ನು ಸೂತ್ರ ರೂಪದಲ್ಲಿ ಪ್ರತಿಪಾದಿಸಿದ್ದಾನೆ ; ಆ ಸೂತ್ರಗಳಿಗೆ ನಾನಾರ್ಥಗಳನ್ನು ಕಲ್ಪಿಸಬಹುದು. ತರುವಾಯ ನೀಲಕಂಠ, ಪ್ರೇಮನಿಧಿ ಮುಂತಾದ ಧೀಮಂತರು ಈ ಸೂತ್ರಗಳಿಗೆ ವ್ಯಾಖ್ಯಾನ ವಿವರಣೆಗಳನ್ನು ಬರೆದು ಸಾಧಾರಣ ಜ್ಯೋತಿಷ ಪಂಡಿತರಿಗೆ ಗ್ರಹಿಕೆಯಾಗುವಂತೆ ಮಾಡಿದ್ದಾರೆ.

ಜೈಮಿನಿ ಜ್ಯೋತಿಷವು ವಿಶಿಷ್ಟ ಲಕ್ಷಣಗಳನ್ನು ಪಡೆದಿದೆ. ಕಾರಕಗಳ ಕಲ್ಪನೆ, ಆಯುರ್ದಾಯವನ್ನು ನಿಷ್ಕರ್ಷಿಸುವ ವಿಶೇಷ ವಿಧಾನ, ಗ್ರಹಗಳ ಬಲ ಕಂಡುಹಿಡಿಯುವ ಸರಳೋಪಾಯ, ವಿವಿಧ ದಶಾ ಪ್ರಭೇದಗಳನ್ನು ಗೊತ್ತು ಹಚ್ಚಿ ಅವಲಂಬಿಸುವ ಕ್ಲಿಷ್ಟ ಕ್ರಮ, ಅರ್ಥಾತ್ ಲಗ್ನಕ್ಕಿತ್ತಿರುವ ಮಹತ್ವ, ಆರೂಢ ಲಗ್ನಕ್ಕಿತ್ತಿರುವ ವೈಶಿಷ್ಟ್ಯ, ಕಾರಕಾಂಶಕ್ಕಿತ್ತಿರುವ ಹೆಚ್ಚು ಪ್ರಾಮುಖ್ಯ ಮತ್ತು ಜೀವನೋಪಾಯವನ್ನು ಕಂಡುಹಿಡಿಯುವುದಕ್ಕೆ ಕಾರಕಾಂಶ ಕೊಡುವ ನಿರ್ದೇಶನ—ಇವೆಲ್ಲ ಇಡೀ ವಿಧಾನಕ್ಕೇ ಒಂದು ಅಸದೃಶವಾದ ಆದಿಮೂಲವನ್ನು ನಿರೂಪಿಸುವಂತೆ ಮಾಡುತ್ತವೆ. ಈ ಕಾರಣಗಳಿಂದಾಗಿ ಜೈಮಿನಿಯು **ನಿಸ್ಸಂಶಯವಾಗಿ** ಪರಾಶರ ಪದ್ಧತಿಗೇ ಪೂರ್ಣವಾಗಿ ಸೇರಿದ್ದರೂ ಆ ಪದ್ಧತಿಯು ಪ್ರತ್ಯೇಕ ಜ್ಯೋತಿಷ ವಿದ್ಯೆ ಎಂದು ಜನ ಭಾವಿಸುವಂತೆ ಆಗಿದೆ.

## 2. ವ್ಯತ್ಯಾಸಗಳು

**ಪರಾಶರಿ ಜೈಮಿನಿಗಳಿಬ್ಬರಿಗೂ** ವಿಭಿನ್ನವೆನಿಸುವ ಕೆಲವು ವ್ಯತ್ಯಾಸಗಳನ್ನು **ನಾವು ಕಾಣಬಹುದು.** ಮೊದಲನೆಯದಾಗಿ, ಜೈಮಿನಿಯ ರಾಶಿಗಳೂ, ಭಾವಗಳೂ **ಅಥವಾ ಮನೆಗಳೂ** ಸಮಾನಾರ್ಥಕವುಳ್ಳವು. ಅದೇ ಪರಾಶರಿ ಕ್ರಮದಲ್ಲಿ **ರಾಶಿಗಳೂ,** ಭಾವಗಳೂ (ಮನೆಗಳು) ಸುಸ್ಪಷ್ಟವಾಗಿ ಪ್ರತ್ಯೇಕವಾಗಿವೆ. **ಜೈಮಿನಿಯಲ್ಲಿ ದೃಷ್ಟಿಯು** ಗ್ರಹಗಳ ಅಂತರವನ್ನು ಅವಲಂಬಿಸಿಲ್ಲ. ಪರಾಶರಿ **ಕಾರಕಗಳು ಸ್ಥಿರವಾದವು,** ಜೈಮಿನಿ ಕಾರಕಗಳು ಬದಲಾವಣೆಯಾಗುತ್ತವೆ.

ಪರಾಶರಿ ಷಡ್ಬಲಗಳ ನಿಷ್ಕರ್ಷೆಗೆ ವಿಸ್ತಾರವಾದ ಲೆಕ್ಕಾಚಾರ ಅವಶ್ಯಕ. ಆದರೆ ಜೈಮಿನಿಯು ಈ ಕಲಾಪವನ್ನು ಬಿಟ್ಟು, ಗ್ರಹಗಳ ಬಲವನ್ನು ಕಂಡುಹಿಡಿಯಲು ಸುಲಭ ವಿಧಾನವನ್ನು ಸೂಚಿಸುತ್ತಾನೆ. ಆಯುರ್ದಾಯ ನಿಷ್ಕರ್ಷೆಯಲ್ಲಿ, ವಿವಿಧ ಯೋಗಗಳ ಫಲಶ್ರುತಿಯಲ್ಲಿ, ದಶೆಗಳ ನಿಷ್ಕರ್ಷೆ ಮತ್ತು ಫಲ ನಿರ್ಣಯ ಕ್ರಮದಲ್ಲಿ, ವಾಸ್ತವವಾಗಿ ಪ್ರತಿಯೊಂದು ರೀತಿಯಲ್ಲೂ ಜೈಮಿನಿ ಮಹರ್ಷಿಯು ಸೋಜಿಗವಾದ ಹೊಸ ಮಾರ್ಗವನ್ನು ಅವಲಂಬಿಸಿದ್ದಾನೆ. ಜೈಮಿನಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಒಂದು ಬಗೆಯ ವಿಶೇಷ ಸಾಮರ್ಥ್ಯವೇ ಬೇಕೇನೋ ಎನಿಸುತ್ತದೆ.

### 3. ಜೈಮಿನಿಯ ಕ್ಲಿಷ್ಟತೆ

ಜೈಮಿನಿ ಮಹರ್ಷಿಯು ಕೆಲವು ಸಂದರ್ಭಗಳಲ್ಲಿ ಹೇಳುವ ವಿಚಾರ ತೊಡಕಾಗಿರುತ್ತದೆ. ಉದಾಹರಣೆಗೆ, ಹಲವಾರು ದಶಾಕ್ರಮಗಳ ಉಲ್ಲೇಖ ಇದೆ. ಯಾವ ವಿಶಿಷ್ಟ ಪರಿಸ್ಥಿತಿಗಳಲ್ಲಿ ವಿವಿಧ ದಶೆಗಳನ್ನು ಬಳಸಬೇಕು ? ವಾಚಕ ತಾನೇ ಊಹಿಸಿಕೊಳ್ಳಬೇಕಾಗಿದೆ. ನಾನು ಕಂಡಮಟ್ಟಿಗೆ ಸೂತ್ರಗಳ ನಾಲ್ಕು ಅಧ್ಯಾಯಗಳಲ್ಲೆಲ್ಲೂ ಯಾವ ಸುಳಿವೂ ಸಿಗುವುದಿಲ್ಲ. ಅಲ್ಲೊಂದು ಕಡೆ, ಇಲ್ಲೊಂದು ಕಡೆ (ಉದಾಹರಣೆಗೆ, ಎರಡನೆಯ ಅಧ್ಯಾಯ, ನಾಲ್ಕನೆಯ ಪಾದ, ಒಂದನೆಯ ಸೂತ್ರ) ನಿರ್ದಿಷ್ಟ ಭಾವದ ಫಲವನ್ನು ತಿಳಿದುಕೊಳ್ಳಲು ಇಂಥಿಂಥ ದಶಾಕ್ರಮವನ್ನು ಅರಿಸಿಕೊಳ್ಳಬಹುದು, ಎಂದು ಸೂಚನೆ ಕೊಟ್ಟಿರುವುದನ್ನು ನಾನು ತಿಳಿಯದೆ ಇಲ್ಲ. ಆದರೆ ಕೊಟ್ಟಿರುವ ಸೂಚನೆಗಳು ಸ್ಪಷ್ಟವಾಗಿಲ್ಲ. ಇತ್ತೀಚೆಗೆ ಕೆಲವು ಲೇಖಕರು ಸುಳಿವನ್ನು ಪತ್ತೆ ಹಚ್ಚುವ ಸಲುವಾಗಿ ಸೂತ್ರಗಳನ್ನು ಹಿಸುಕಿ (Strain) ವ್ಯಥಾ ಶ್ರಮ ಪಟ್ಟಿದ್ದಾರೆ, ಆದರೆ ಅದು ಸರಿಯಾದ ಮಾರ್ಗ ಎಂದು ನನಗೆ ಅನ್ನಿಸುವುದಿಲ್ಲ.

ಅನೇಕ ಪಂಡಿತರ ಸಂಗಡ ನಾನು ನಡೆಸಿರುವ ಚರ್ಚೆಯಿಂದಲೂ ಈ ಜ್ಯೋತಿಷ ಪದ್ಧತಿಯನ್ನು ಕುರಿತು ಪ್ರಸ್ತುತವಿರುವ ವಿಪುಲ ಸಾಹಿತ್ಯವನ್ನು ಪರಿಶೀಲಿಸಿರುವುದರಿಂದಲೂ ನನಗೆ ಖಚಿತವಾಗುದೇನೆಂದರೆ ಜೈಮಿನಿ ಮಹರ್ಷಿಯು ಆಯುರ್ದಾಯ ನಿಷ್ಕರ್ಷೆಗೆ ಮಾತ್ರವಲ್ಲದ ಜಾತಕನ ಜೀವಿತದಲ್ಲಿ ನಡೆಯಲಿರುವ ಘಟನೆಗಳನ್ನು ಮುನ್ನುಡಿಯಲ್ಲೂ ಚರದಶೆಗೇ ಪ್ರಾಶಸ್ತ್ಯ ಕೊಡುತ್ತಾನೆ. ವಾಸ್ತವ ಭವಿಷ್ಯಾವಧಾನದಲ್ಲಿ ಯಾವ ದಶೆಯು ಸಮರ್ಪಕವಾದ ಫಲ ಸೂಚಿಸುತ್ತದೆ ಎಂಬುದನ್ನು ವಾಚಕರು ತಾವೇ ಗೊತ್ತುಮಾಡಿಕೊಳ್ಳ

ಬೇಕು. ಯಾವ ಸೂತ್ರವಾದರೂ ಕಠಿಣವಾಗಿಯೋ ಮಸಕಾಗಿಯೋ ಅಥವಾ ಎರಡು ಅರ್ಥ ಕೊಡತಕ್ಕುದಾಗಿದೆಯೋ ಕಂಡಾಗೆಲ್ಲ (ಸೂತ್ರದ ನೈಜಾರ್ಥವನ್ನು ಗ್ರಹಿಸಲು ನಾನು ಅಸಮರ್ಥನಾಗಿರುವುದೇ ಕಾರಣ ಇರಬಹುದು), ನಾನು ಪರಾಶರ ಅಥವಾ ವೃದ್ಧಯವನ ಹೇಳುವ ವಿವರಗಳನ್ನೋ ಅಥವಾ ಜೈಮಿನಿ ಪದ್ಧತಿಯನ್ನು ಕುರಿತ ಪ್ರಸ್ತುತ ವ್ಯಾಖ್ಯಾನವನ್ನೇ ಆಶ್ರಯಿಸಬೇಕಾಗಿದೆ.

ಪುಸ್ತಕದ ಹೆಸರು ಸೂಚಿಸುವಂತೆ, ಈ ಪ್ರದೀಪಿಕೆಯು ವಿದ್ವಜ್ಜನರ ಅವಗಾಹನೆಗೆ ಜೈಮಿನಿ ತತ್ವಗಳ ಸಾರಾಂಶವನ್ನು ನಾನು ಗ್ರಹಿಸಿಕೊಂಡಿರುವ ರೀತಿಯಲ್ಲಿ ನಿವೇದಿಸಲು ಅಪೇಕ್ಷಿಸಿದ್ದೇನೆ. ಮೂರನೆಯ ಅಧ್ಯಾಯದ ಎರಡನೇ ಪಾದದಲ್ಲಿ ಮಹರ್ಷಿಯು ಆಧಾನ ಲಗ್ನಕ್ಕೆ ಅನ್ವಯವಾಗುವಂತೆ ವಿವಿಧ ಭಾವಗಳಿಗೆ ಸಂಬಂಧಪಟ್ಟ ಸಂಯೋಜನೆಗಳನ್ನು ಕೊಟ್ಟಿದ್ದಾನೆ. ಆದರೆ ಈ ಪ್ರದೀಪಿಕೆಯಲ್ಲಿ ಜನ್ಮಲಗ್ನಕ್ಕೂ ಅವನ್ನು ಅನ್ವಯಿಸಬೇಕೆಂದೂ ನಾನು ಸಲಹೆ ಮಾಡಿದ್ದೇನೆ. ಏಕೆಂದರೆ ಎಲ್ಲ ಪ್ರಾಚೀನ ಶಾಸ್ತ್ರಗ್ರಂಥಗಳಲ್ಲೂ ಪ್ರಶ್ನ ಲಗ್ನ ಅಥವಾ ಆಧಾನ ಲಗ್ನ ಕುರಿತಾಗಲೆಲ್ಲ ಜನ್ಮಲಗ್ನವನ್ನೂ ತಪ್ಪದೆ ಅಧ್ಯಾಹಾರ ಮಾಡಿಕೊಳ್ಳಲಾಗುತ್ತದೆ.

## 4. ಮಾದರಿ ಜಾತಕ

ಜೈಮಿನಿ ಜ್ಯೋತಿಷದ ಗಣಿತ ಭಾಗವನ್ನು ಉದಹರಿಸುವ ಸಲುವಾಗಿ, ನಾನು ಒಂದು ಕುಂಡಲಿಯನ್ನು ಕೊಡುತ್ತೇನೆ. ಜನನ 12–2–1856 ಮಧ್ಯಾಹ್ನ 12–21 ಘಂಟೆ ಅಥವಾ ಸೂರ್ಯೋದಯವಾದ ಮೇಲೆ 14–30 ಘಳಿಗೆ. ರೇಖಾಂಶ 84° ಪೂರ್ವ, ಅಕ್ಷಾಂಶ 18° ಉತ್ತರ. ಗ್ರಹ ಸ್ಥಿತಿಗಳನ್ನೂ ರಾಶಿ ನವಾಂಶ ಕುಂಡಲಿಗಳನ್ನೂ ಕೆಳಗೆ ಕೊಟ್ಟಿದೆ :

| ಗ್ರಹ | ರಾಶಿ | ಡಿಗ್ರಿ ಅಥವಾ ಅಂಶ | ಮಿನಿಟ್ ಅಥವಾ ಕಲೆ |
|---|---|---|---|
| ಸೂರ್ಯ | ಕುಂಭ | 1 | 12 |
| ಚಂದ್ರ | ಮೇಷ | 18 | 29 |
| ಮಂಗಳ | ತುಲ | 0 | 55 |
| ಬುಧ | ಕುಂಭ | 8 | 27 |
| ಗುರು | ಕುಂಭ | 21 | 38 |
| ಶುಕ್ರ | ಧನುಸ್ | 20 | 33 |

| ಗ್ರಹ | ರಾಶಿ | ಡಿಗ್ರಿ ಅಥವಾ ಅಂಶ | ಮಿನಿಟ್ ಅಥವಾ ಕಲೆ |
|---|---|---|---|
| ಶನಿ | ಮಿಥುನ | 3 | 20 |
| ರಾಹು | ಮೇಷ | 6 | 9 |
| ಕೇತು | ತುಲ | 6 | 9 |
| ಲಗ್ನ | ವೃಷಭ | 13 | 9 |

| | | | |
|---|---|---|---|
| | ರಾಹು<br>ಚಂದ್ರ<br>ಉಪಪಾದ | ಲಗ್ನ | ಶನಿ |
| ರವಿ. ಬುಧ<br>ಗುರು (ಆತ್ಮ<br>ಕಾರಕ) | ರಾಶಿ | | ಆರೂಢ<br>ಘಟಿಕಾ<br>ಲಗ್ನ |
| | | | |
| ಶುಕ್ರ<br>ವರ್ಣದ ಲಗ್ನ | | ಹೋರಲಗ್ನ<br>ಕುಜ<br>ಕೇತು | ಅ. 2 |

| | | | |
|---|---|---|---|
| | ಕಾರಕಾಂಶ ಲಗ್ನ ಗುರು | ರಾಹು ಹೋರಾ ಲಗ್ನ | |
| | ನವಾಂಶ | | |
| | | | |
| ಬುಧ | ಕೇತು ಘಟಿಕಾ ಲಗ್ನ | ರವಿ, ಶನಿ ಶುಕ್ರ, ಕುಜ | ಚಂದ್ರ |

# ಮುಖ್ಯ ಲಕ್ಷಣಗಳ ವಿವರ

## 5. ಕಾರಕ

ಪ್ರತಿಯೊಂದು ಗ್ರಹವೂ ಬದುಕಿನ ಕೆಲವು ಘಟನೆಗಳನ್ನು ಸೂಚಿಸುವ ಕಾರಕ ಎಂದು ಭಾವಿಸಲಾಗಿದೆ. ಕಾರಕದ ಫಲವು ಭಾವದ ಅಥವಾ ಮನೆಯ ಫಲದಂತೆ. ಜಾತಕವನ್ನು ತಿಳಿಯಹೇಳುವುದಕ್ಕೆ ಕಾರಕರು ಮುಖ್ಯ ಪಾತ್ರ ವಹಿಸುತ್ತಾರೆ.

## 6. ನೈಸರ್ಗಿಕ ಕಾರಕ

ಪರಾಶರ ಪದ್ಧತಿಯ ಪ್ರಕಾರ, ಕಾರಕರು ಕುಂಡಲಿಯಲ್ಲಿ ಎಲ್ಲೇ ಇರಲಿ ಸ್ಥಿರ ಸ್ವಭಾವವುಳ್ಳವರಾಗಿರುತ್ತಾರೆ. ಮುಖ್ಯ ಕಾರಕರು ಇವರು :

| ಗ್ರಹ | ಕಾರಕ |
|---|---|
| ರವಿ | ತಂದೆ |
| ಚಂದ್ರ | ತಾಯಿ |
| ಕುಜ | ಅಣ್ಣ, ತಮ್ಮ |
| ಬುಧ | ವೃತ್ತಿ |
| ಗುರು | ಮಕ್ಕಳು |
| ಶುಕ್ರ | ಗಂಡ ಅಥವಾ ಹೆಂಡತಿ |
| ಶನಿ | ಆಯುರ್ದಾಯ |
| ರಾಹು | ಮಾತೃ ಸಂಬಂಧ |
| ಕೇತು | ಪಿತೃ ಸಂಬಂಧ |

ಗೋಚರ ಫಲ ಹೇಳುವಾಗ ಕಾರಕ ಗ್ರಹಗಳು ಪ್ರಾಮುಖ್ಯ ಪಡೆಯುತ್ತಾರೆ. ಯಾವುದೇ ಭಾವವು ದುರ್ಬಲವಾಗಿದ್ದರೂ ಆ ಭಾವ ಸಂಬಂಧವುಳ್ಳ ಕಾರಕ ಗ್ರಹವು ಪ್ರಬಲವಾಗಿದ್ದರೆ, ತಕ್ಕ ಫಲ ದೊರೆಯುತ್ತದೆ.

## 7. ಜೈಮಿನಿ ಕಾರಕಗ್ರಹಗಳು

ಜೈಮಿನಿ ವಿಧಾನದ ಪ್ರಕಾರ ಪ್ರತಿ ಜಾತಕಕ್ಕೆ ಅನುಗುಣವಾಗಿ ಕಾರಕರು ಬದಲಾವಣೆಯಾಗುತ್ತಾರೆ. ಯಾವ ಗ್ರಹಕ್ಕೆ ಯಾವ ಕಾರಕತ್ವವಾದರೂ ದೊರಕಬಹುದು. ಏಕೆಂದರೆ ಕಾರಕತ್ವ ನಿಷ್ಕರ್ಷೆಗೆ ಆಧಾರ ಸಂಬಂಧಪಟ್ಟ ರಾಶಿಯಲ್ಲಿ ಕಾರಕ ಗ್ರಹವು ಎಷ್ಟು ಅಂಶಗಳನ್ನು ಹೊಂದಿದೆ ಎಂಬುದು ಮಾತ್ರ. ಜೈಮಿನಿ ಕಾರಕರು ಏಳು : (1) ಆತ್ಮ, (2) ಅಮಾತ್ಯ, (3) ಭ್ರಾತೃ, (4) ಮಾತೃ, (5) ಪುತ್ರ, (6) ಜ್ಞಾತಿ ಮತ್ತು (7) ದಾರ.

## 8. ಆತ್ಮಕಾರಕ

ಪ್ರಧಾನ ಸೂಚಕ ಅಥವಾ ಅಧಿನಾಯಕನದೇ ಪ್ರಾಮುಖ್ಯ. ಯಾವ ರಾಶಿಯಲ್ಲಾದರೂ ಸರಿ ಯಾವ ಗ್ರಹ ಅತ್ಯಂತ ಅಧಿಕ ಅಂಶಗಳನ್ನು ಪಡೆದಿರುತ್ತದೋ ಅದೇ ಆತ್ಮಕಾರಕ ಗ್ರಹ. ಆತ್ಮಕಾರಕನ ಬಲಾಬಲಗಳು ಇಡೀ ಜಾತಕದ ಬಲಾಬಲಗಳನ್ನು ಪ್ರತಿಬಿಂಬಿಸುವಂತೆ ಕಾಣುತ್ತದೆ. ಆದರಿಂದಾಗಿ ಆತ್ಮಕಾರಕನ ಸ್ಥಾನ ತುಂಬ ಪ್ರಾಮುಖ್ಯವಾದುದು. ನೈಸರ್ಗಿಕ ಆತ್ಮಕಾರಕ ಮಾತ್ರ ಸೂರ್ಯನೆ.

## 9. ಅಮಾತ್ಯಕಾರಕ

ಎರಡನೆಯ ಪ್ರಾಮುಖ್ಯ ಅಮಾತ್ಯಕಾರಕನದು. ರಾಶಿ ಯಾವುದಾದರೂ ಯಾವ ಗ್ರಹವು ಎರಡನೆಯ ಸ್ಥಾನದ ಅಂಶಗಳನ್ನು ಪಡೆಯುತ್ತದೆಯೋ ಅದೇ ಅಮಾತ್ಯಕಾರಕ ಅಥವಾ ಉಪನಾಯಕ. ನೈಸರ್ಗಿಕವಾದ ಅಥವಾ ಸ್ಥಿರವಾದ ಅಮಾತ್ಯಕಾರಕ ಗ್ರಹ ಎಂಬುದಿಲ್ಲ. ಆದರೆ ಬುಧನನ್ನು ಹಾಗೆಂದು ನಾವು ಪರಿಗಣಿಸಬಹುದು.

## 10. ಭ್ರಾತೃಕಾರಕ

ಅಮಾತ್ಯಕಾರಕ ಗ್ರಹಕ್ಕೆ ಎರಡನೆಯ ಸ್ಥಾನದ ಅಂಶಗಳನ್ನು ಅವಲಂಬಿಸಿರುವ ಗ್ರಹವೇ ಭ್ರಾತೃಕಾರಕ ಅಥವಾ ಅಣ್ಣತಮ್ಮಂದಿರ ಒಡೆಯ. ಅಣ್ಣ

ತಮ್ಮಂದಿರು, ಅಕ್ಕತಂಗಿಯರುಗಳಿಗೆ ಸಂಬಂಧಿಸಿದ ಎಲ್ಲ ಘಟನೆಗಳನ್ನೂ ಭ್ರಾತೃಕಾರಕನಿಂದ ತಿಳಿಯತಕ್ಕದ್ದು. ಒಡಹುಟ್ಟಿದವರಿಗೆ ಕುಜನೇ ನೈಸರ್ಗಿಕ ಕಾರಕ.

**11. ಮಾತೃಕಾರಕ**

ತಾಯಿಯನ್ನು ಸೂಚಿಸುವ ಗ್ರಹವು ಯಾವ ರಾಶಿಯಲ್ಲಾದರೂ ಸರಿಯೇ ಭ್ರಾತೃಕಾರಕ ಗ್ರಹಕ್ಕಿಂತ ಎರಡನೆಯ ಸ್ಥಾನದ ಅಂಶಗಳನ್ನು ಪಡೆದಿರುವವ. ಚಂದ್ರನು ನೈಸರ್ಗಿಕ ಮಾತೃಕಾರಕ.

**12. ಪುತ್ರಕಾರಕ**

ಮಕ್ಕಳ ನಾಯಕ ಯಾವ ರಾಶಿಯಲ್ಲಾದರೂ ಮಾತೃಕಾರಕನಿಗಿಂತ ಎರಡನೆಯ ಸ್ಥಾನದ ಅಂಶಗಳನ್ನು ಗಳಿಸಿರುವ ಗ್ರಹ, ಸ್ವಾಭಾವಿಕ ಅಥವಾ ನೈಸರ್ಗಿಕ ಪುತ್ರಕಾರಕ ಗುರು.

**13. ಜ್ಞಾತಿಕಾರಕ**

ಪುತ್ರಕಾರಕನಿಗಿಂತ ಎರಡನೆಯ ಜಾಗದ ಅಂಶಗಳನ್ನು ಯಾವುದೇ ರಾಶಿಯಲ್ಲಾದರೂ ಸರಿಯೇ ಆಯಿದಿರುವ ಗ್ರಹವು ಜ್ಞಾತಿಕಾರಕ ಎನಿಸುತ್ತಾನೆ. ನೈಸರ್ಗಿಕ ಜ್ಞಾತಿಕಾರಕ ಕುಜ—ಅಂಗಾರಕ.

**14. ದಾರಾಕಾರಕ**

ಗಂಡ ಅಥವಾ ಹೆಂಡತಿಯ ಸೂಚಕ ಅಥವಾ ಅಧಿಪತಿ. ಎಲ್ಲಕ್ಕಿಂತ ಕಡಿಮೆ ಅಂಶಗಳನ್ನು ಪಡೆದ ಗ್ರಹ. ನೈಸರ್ಗಿಕ ದಾರಾಕಾರಕ ಅಥವಾ ಕಳತ್ರ ಕಾರಕ ಶುಕ್ರ.

**15. ಕಾರಕ ನಿಷ್ಕರ್ಷೆ**

ಮೇಲೆ ಹೇಳಿರುವುದನ್ನು ಹೀಗೆ ಸಂಗ್ರಹಿಸಬಹುದು. ಏಳು ಗ್ರಹಗಳ ಸ್ಪಷ್ಟಗಳನ್ನು (Longitudes) ರಾಶಿ, ಅಂಶ (ಡಿಗ್ರಿ), ಕಲೆ (ನಿಮಿಷ), ವಿಕಲೆ (ಸೆಕೆಂಡ್)ಗಳಾಗಿ ಪರಿವರ್ತಿಸಿ, ರಾಶಿಗಳನ್ನು ಬಿಟ್ಟುಬಿಡಿ. ಡಿಗ್ರಿ ನಿಮಿಷ ಸೆಕೆಂಡ್ ಗಳನ್ನು ತೆಗೆದುಕೊಂಡು ಗ್ರಹಗಳು ಪಡೆದಿರುವ ಡಿಗ್ರಿಗಳನ್ನು ಇಳಿಮುಖವಾಗಿ ಪಟ್ಟಿಮಾಡಿ. ಹೆಚ್ಚು ಡಿಗ್ರಿಗಳುಳ್ಳ ಗ್ರಹವೇ ಆತ್ಮಕಾರಕ. ಉಳಿದವನ್ನು ಕ್ರಮ

ವಾಗಿ ಗುರುತಿಸಿ. ಈ ಕಾರಕಗಳು ಕ್ರಮವಾಗಿ ಪ್ರಥಮದಿಂದ ಸಪ್ತಮದ ವರೆಗೆ ಭಾವಗಳ ಕ್ರಮವನ್ನೇ ಅವಲಂಬಿಸಿರುವುದು ಕಾಣಬರುತ್ತದೆ. ದ್ವಿತೀಯ ಭಾವವು ಧನಭಾವ; ಆದರೆ ಎರಡನೆಯ ಕಾರಕ ಅಮಾತ್ಯಕಾರಕ. ಅಷ್ಟೇ ವ್ಯತ್ಯಾಸ.

## 16. ವಿನಾಯಿತಿಗಳು

ಕಾರಕ ನಿಷ್ಕರ್ಷೆಯ ಸಾಮಾನ್ಯ ನಿಯಮಗಳಿಗೆ ಕೆಲವು ವಿನಾಯಿತಿಗಳು ಅಥವಾ ವಾಪಾಕ್ಷಗಳುಂಟು. ಎರಡು ಅಥವಾ ಮೂರು ಗ್ರಹಗಳು ಒಂದೇ ಡಿಗ್ರಿಯನ್ನು ಪಡೆದಿರಬಹುದು. ಆಗ ಅವು ಒಂದೇ ಕಾರಕತ್ವವನ್ನು ಹಂಚಿ ಕೊಳ್ಳುವಂತಾಗುತ್ತದೆ. ಇಂಥ ಪ್ರಸಂಗಗಳು ಅಪರೂಪ, ಆದರೆ ಅಸಂಭವ ವಲ್ಲ. ಅಂಥ ವಿಶೇಷ ಪರಿಸ್ಥಿತಿಯಲ್ಲಿ ಒಂದೇ ಅಧಿಪತ್ಯವನ್ನು ಎರಡು ಅಥವಾ ಮೂರು ಗ್ರಹಗಳು ಹಂಚಿಕೊಳ್ಳಬೇಕಾದಾಗ ಇತರೇ ಕೆಲವು ಅಧಿಪತ್ಯಗಳು ಖಾಲಿಯಾಗುತ್ತವೆ. ಆಗ ಅಂಥ ಕಾರಕತ್ವಗಳನ್ನು ರಾಹು ಮತ್ತು ಇತರ ನೈಸರ್ಗಿಕ ಕಾರಕಗಳಿಗೆ ಕೊಡಬೇಕಾಗುತ್ತದೆ. ರವಿಯು ಭ್ರಾತೃಕಾರಕನಾಗು ತ್ತಾನೆ ಅನ್ನಿ. ಚಂದ್ರ ಕುಜರೂ ಅದೇ ಡಿಗ್ರಿ ಅಥವಾ ಅಂಶಗಳನ್ನು ಪಡೆದರೆ ಮೂರು ಗ್ರಹಗಳೂ ಭ್ರಾತೃಕಾರಕರಾಗುತ್ತಾರೆ. ಆಗ ಚಂದ್ರ ಕುಜರು ಪಡೆಯುತ್ತಿದ್ದ ಕಾರಕತ್ವಗಳು ಖಾಲಿಯಾಗುತ್ತವೆ. ಮೇಲೆ ಹೇಳಿದ ಸಂದರ್ಭ ದಲ್ಲಿ ಚಂದ್ರ ಕುಜರು ಸೂರ್ಯನ ಸಂಗಡ ಭ್ರಾತೃಕಾರಕರಾಗುತ್ತಾರಾಗಿ, ಮಾತೃಕಾರಕ ಪುತ್ರಕಾರಕತ್ವಗಳು ಖಾಲಿಯಾಗುತ್ತವಷ್ಟೆ. ಆಗ ರಾಹು ಮಾತೃ ಕಾರಕನಾಗುತ್ತಾನೆ ಮತ್ತು ನೈಸರ್ಗಿಕ ಪುತ್ರಕಾರಕನಾದ ಗುರುವು ಪುತ್ರಕಾರಕ ನಾಗುತ್ತಾನಾಗಿ ಆ ಸ್ಥಾನವನ್ನು ತುಂಬುತ್ತಾನೆ. ಇದು ಅಪರೂಪ. ರಾಹುವು ಕಾರಕನಾಗಬೇಕಾದರೆ ಎರಡು ಮೂರು ಗ್ರಹಗಳು ಒಂದೇ ಅಂಶ, ಕಲೆ ಮತ್ತು ವಿಕಲೆಗಳನ್ನು ಗಳಿಸಿರಬೇಕು. ಇಲ್ಲವಾದರೆ ರಾಹುವಿಗೆ ಆ ಅರ್ಹತೆಯಿಲ್ಲ. ಕಾರಕ ನಿಷ್ಕರ್ಷೆಯನ್ನು ಜೈಮಿನಿಯು ವಿವರಿಸುವ ಸೂತ್ರದ ಎರಡನೆಯ ಭಾಗವಾದ "ಸಪ್ತಾನಾಂ ಅಷ್ಟಾನಾಂ ವಾ" ಎಂದರೆ "ಸೂರ್ಯನಿಂದ ಶನಿಯವರೆಗೆ ಏಳು ಗ್ರಹಗಳು ಅಥವಾ ಸೂರ್ಯನಿಂದ ರಾಹುವರೆಗೆ ಎಂಟು ಗ್ರಹಗಳು" ಎಂದರ್ಥ. ವ್ಯಾಖ್ಯಾನಕಾರರು ಈ ಸೂತ್ರಭಾಗವನ್ನು ಬೇರೆ ಬೇರೆಯಾಗಿ ತಿಳಿಯಹೇಳುತ್ತಾರೆ. ಕೆಲವರ ಪ್ರಕಾರ ಕಾರಕ ಸಂಖ್ಯೆ ಎಂಟು (ಕೆಲವು ಜೈಮಿನಿ ಪಾಠಾಂತರಗಳಲ್ಲಿ, ಹತ್ತನೆ ಪಿತೃಕಾರಕನೂ ಸೇರಿರುತ್ತಾನೆ.)

ಆಗ್ಗೆ ಸೂರ್ಯನಿಂದ ರಾಹುವರೆಗೆ ಆತ್ಮಕಾರಕ ಇತ್ಯಾದಿಯಾಗಿ ಅಂಶಗಳ ಮೇರೆಗೆ ಕಾರಕನನ್ನು ನಿಷ್ಕರ್ಷಿಸಲಾಗುತ್ತದೆ. (ರಾಹುವಿನ ಅಂಶವನ್ನು ರಾಶಿಯ ಕಡೆಯ ಭಾಗದಿಂದ ಹಿಂದಕ್ಕೆ ಎಣಿಸಬೇಕು.) ಇತರ ಪ್ರಕಾರ, ಸೂರ್ಯನಿಂದ ಶನಿಯವರೆಗೆ ಕಾರಕಗಳು ಏಳು ಮಾತ್ರ (ಪಿತೃಕಾರಕ ಇಲ್ಲಿ) ಮತ್ತು ರಾಹುವು ಎರಡು ಮೂರು ಗ್ರಹಗಳು ಏಕಸ್ಥಾನವನ್ನು ಗಳಿಸಿದಾಗ ಖಾಲಿ ಬೀಳುವ ಜಾಗವನ್ನು ಮಾತ್ರ ತುಂಬುತ್ತಾನೆ. ಈ ಅಭಿಪ್ರಾಯವೇ ಸರಿ ಎಂದು ಕಾಣುತ್ತದೆ. ಇದಕ್ಕೆ ಪರಾಶರನ ಸಮರ್ಥನೆ ಇದೆ*. ಎರಡು ಅಥವಾ ಮೂರು ಗ್ರಹಗಳು ಒಂದೇ ಅಂಶವನ್ನು ಗಳಿಸಿದಾಗ ಮಾತ್ರ ರಾಹುವು ಎಂಟನೆಯ ಗ್ರಹವಾಗಿ ಎಣಿಕೆಗೆ ಬರುತ್ತಾನೆ.

ಒಂದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಕಾರಕಗಳಾರೆಂದು ನಿಷ್ಕರ್ಷಿಸಿ.**

ಗ್ರಹಗಳ ಸ್ಪಷ್ಟಗಳನ್ನು ಅಂದರೆ, ಗ್ರಹಗಳಿರುವ ಅಂಶಗಳನ್ನು ಇಳಿಮುಖವಾಗಿ ಪರಿಗಣಿಸಿಕೊಂಡು ಪಟ್ಟಿಮಾಡಿದರೆ ಹೀಗೆ ಸಿದ್ಧವಾಗುತ್ತದೆ :—

| ಗ್ರಹ | | ರಾಶಿ | | ಡಿಗ್ರಿ | ನಿಮಿಷ |
|---|---|---|---|---|---|
| ಗುರು | ... | ಕುಂಭ | (♒) | 21 | 38 |
| ಶುಕ್ರ | ... | ಧನುಸ್ | (♐) | 20 | 33 |
| ಚಂದ್ರ | ... | ಮೇಷ | (♈) | 18 | 29 |
| ಬುಧ | ... | ಕುಂಭ | (♒) | 8 | 27 |
| ರಾಹು | ... | ಮೇಷ | (♈) | 6 | 9 |
| ಕೇತು | .... | ತುಲ | (♎) | 6 | 9 |
| ಶನಿ | ... | ಮಿಥುನ | (♊) | 3 | 20 |
| ರವಿ | ... | ಕುಂಭ | (♒) | 1 | 12 |
| ಕುಜ | ... | ತುಲ | (♎) | 0 | 2/3 |

* ರವ್ಯಾದಿ ಶನಿ ಪರ್ಯಂತಂ ಭವಂತಿ ಸಪ್ತಕಾರಕಾಃ ।
ಅಸ್ತ್ಯಸಾಮ್ಯಂ ಗ್ರಹೈಃ ದ್ವೌಚ ರಾಹುಂ ತಂಗುಣಯೇ ದ್ವಿಜಃ ॥

ಗುರುವಿಗೇ ಹೆಚ್ಚು ಅಂಶವಿರುವ ಕಾರಣ ಅವನೇ ಆತ್ಮಕಾರಕ. ಎರಡನೆಯ ಸ್ಥಾನ ಪಡೆದ ಶುಕ್ರ ಅಮಾತ್ಯಕಾರಕನಾಗುತ್ತಾನೆ. ಇತರ ಗ್ರಹಗಳು ಇದೇ ರೀತಿ ವಿವಿಧ ಕಾರಕಗಳನ್ನು ಕೆಳಗೆ ಕೊಟ್ಟಿರುವಂತೆ ಪಡೆಯುತ್ತವೆ :

| ಕಾರಕ | ಗ್ರಹ | |
|---|---|---|
| ಆತ್ಮಕಾರಕ | ಗುರು | (♃) |
| ಅಮಾತ್ಯಕಾರಕ | ಶುಕ್ರ | (♀) |
| ಭ್ರಾತೃಕಾರಕ | ಚಂದ್ರ | (☾) |
| ಮಾತೃಕಾರಕ | ಬುಧ | (☿) |
| ಪುತ್ರಕಾರಕ | ಶನಿ | (♄) |
| ಜ್ಞಾತಿಕಾರಕ | ಸೂರ್ಯ | (☉) |
| ದಾರಾಕಾರಕ | ಕುಜ | (♂) |

## 17. ಉಪ–ಕಾರಕರು

ಜೈಮಿನಿ ಭಾಷ್ಯಕಾರರು ಸೂಚಿಸುವಂತೆ ಕೆಲವು ಉಪ–ಕಾರಕರನ್ನು ಗೊತ್ತುಮಾಡುವುದರಿಂದ ಭವಿಷ್ಯ ಹೇಳಲು ಸಹಾಯವಾಗುತ್ತದೆ : (1) ಕುಜ—ಅಕ್ಕತಂಗಿಯರು, ತಮ್ಮಂದಿರು, ಮಲತಾಯಿ, ಭಾವಮೈದುನರು ; (2) ಬುಧ—ಸೋದರಮಾವಂದಿರು, ಸೋದರತ್ತೆಯರು ; (3) ಗುರು—ತಂದೆಯ ತಂದೆ, ತಂದೆಯ ತಾಯಿ ; (4) ಶುಕ್ರ—ಹೆಂಡತಿಯ ಮಾತಾಪಿತೃಗಳು, ತಾಯಿಯ ಅಜ್ಜಿ ಅಜ್ಜರು.

## 18. ವಿವಿಧ ಬಗೆಯ ಲಗ್ನಗಳು

ಭವಿಷ್ಯಾವಧಾನಕ್ಕಾಗಿ, ವಿವಿಧ ಲಗ್ನಗಳನ್ನು ಪ್ರಸ್ತಾಪಿಸಿದೆ. ಅವು ಯಾವುವೆಂದರೆ : (1) ಆರೂಢ ಲಗ್ನ, (2) ಭಾವಲಗ್ನ, (3) ಹೋರಾ ಲಗ್ನ, (4) ವರ್ಣದ ಲಗ್ನ, (5) ಘಟಿಕಾ ಲಗ್ನ ಮತ್ತು (6) ನಿಷೇಕ ಲಗ್ನ.

## 19. ಆರೂಢ ಲಗ್ನ

ಜನ್ಮಲಗ್ನದಿಂದ ಲಗ್ನಾಧಿಪತಿಯು ಎಷ್ಟು ರಾಶಿಗಳು ಆಚೆಯಿರುತ್ತಾನೋ, ಅಷ್ಟು ರಾಶಿಗಳನ್ನು ಲಗ್ನಾಧಿಪತಿಯಿಂದ ಎಣಿಸಿ, ಅದೇ ಆರೂಢ ಅಥವಾ ಪದಲಗ್ನ. ಕುಂಭವು ಲಗ್ನ ಅನ್ನಿ. ಲಗ್ನಾಧಿಪತಿ ವೃಷಭದಲ್ಲಿ, ಲಗ್ನದಿಂದ

ನಾಲ್ಕನೆಯ ರಾಶಿಯಲ್ಲಿ ಇದ್ದಾನೆನ್ನಿ. ಆಗ ವೃಷಭದಿಂದ ನಾಲ್ಕನೆಯ ರಾಶಿ ಯಾದ ಸಿಂಹವು ಆರೂಢಲಗ್ನವಾಗುತ್ತದೆ.

ಎರಡನೆಯ ಉದಾಹರಣೆ : **ಮೊದರಿ ಜಾತಕದಲ್ಲಿ ಆರೂಢಲಗ್ನವನ್ನು ಕಂಡುಹಿಡಿಯಿರಿ.**

ಲಗ್ನವು ವೃಷಭ, ಲಗ್ನಾಧಿಪತಿ ಶುಕ್ರ ಧನುಸ್ಸಿನಲ್ಲಿ, ಲಗ್ನದಿಂದ 8ನೆಯ ರಾಶಿಯಲ್ಲಿ ಇದ್ದಾನೆ. ಆದಕಾರಣ ಧನುಸ್ಸಿನಿಂದ 8ನೆಯ ರಾಶಿಯಾದ ಕರ್ಕಾಟಕವು ಆರೂಢ ಲಗ್ನ.

## 20. ಹೋರಾ ಲಗ್ನ*

ಸೂರ್ಯೋದಯಾದನಂತರ ಸಂದ ಜನನ ಕಾಲದ ಘಟಿಗಳನ್ನು 2.5 ರಿಂದ ಭಾಗಿಸಿ, ಭಾಗಲಬ್ಧಕ್ಕೆ ಒಂದಂಕವನ್ನು ಸೇರಿಸಿ, ಜನ್ಮಲಗ್ನವು ಬೆಸನಾದರೆ ಸೂರ್ಯನಿಂದಲೂ ಸಮನಾದರೆ ಲಗ್ನದಿಂದಲೂ ಎಣಿಸಿದರೆ ಹೋರಾ ಲಗ್ನ ದೊರಕುತ್ತದೆ. ಶೇಷವನ್ನು ಡಿಗ್ರಿಗಳಾಗಿ ಪರಿವರ್ತಿಸಿದರೆ ಹೋರಾ ಲಗ್ನದ ಖಚಿತವಾದ ಅಂಶವು ಸಿಗುತ್ತದೆ.

ಮೂರನೆಯ ಉದಾಹರಣೆ: **ಮೊದರಿ ಜಾತಕದಲ್ಲಿ ಹೋರಾ ಲಗ್ನವನ್ನು ಕಂಡುಹಿಡಿಯಿರಿ.**

ಲಗ್ನವು ವೃಷಭ, ಸಮರಾಶಿ.

---

* ಹೋರಾ ಲಗ್ನ ಭಾವಲಗ್ನಗಳನ್ನು ಗುಣಿಸಲು ಸೂಚಿಸಿರುವ ಕ್ರಮಗಳು ಗಣಿತ ಶಾಸ್ತ್ರದ ಪ್ರಕಾರ ಸರಿಯಾಗಿ ಕಾಣಬರುವುದಿಲ್ಲ. ಲಗ್ನದ ಖಚಿತವಾದ ಅಂಶವು ಬೇಡವಾದಲ್ಲಿ ಪರವಾಗಿಲ್ಲ. ಹೋರಾ ಲಗ್ನದಲ್ಲಿ ಪ್ರತಿ ಹೋರೆಯೂ 2.5 ಘಳಿಗೆಯಾಗಿ ಒಂದು ರಾಶಿಗೆ ಅರ್ಥಾತ್ 30 ಡಿಗ್ರಿಗಳಿಗೆ ಸಮ. ಅಂದರೆ ಪ್ರತಿ ಘಳಿಗೆಯೂ 12°ಗಳಿಗೆ ಸಮವಾಗುತ್ತದೆ. ಗಣಿತಶಾಸ್ತ್ರದ ಪ್ರಕಾರ ಭಾವಿಸಿದರೆ ಸೂರ್ಯೋದಯದ ತರುವಾಯ ಸಂದ ಜನನ ಘಳಿಗೆ ಲಗ್ನವು ಬೆಸವಾದರೆ ಸೂರ್ಯನ ನಿರ್ದಿಷ್ಟ ಅಂಶದಿಂದಲೂ ಅಥವಾ ಲಗ್ನವು ಸಮವಾದರೆ ಹೋರಾ ಲಗ್ನದಿಂದಲೂ ಎಣಿಸಬೇಕು. ಮೂರನೆಯ ಉದಾಹರಣೆಯಲ್ಲಿ ಹೋರಾ ಲಗ್ನವು $14.5 \times 12 = 174°$ಗಳಷ್ಟು ಜನ್ಮ ಲಗ್ನದಿಂದ ದೂರವಾಗುತ್ತದೆ. ಆದಕಾರಣ ಗಣಿತ ಶಾಸ್ತ್ರದ ಪ್ರಕಾರ ಕರಾರುವಾಕ್ಕಾಗಿ ಹೋರಾ ಲಗ್ನವು $43°9' + 174° = 217°9'$ = ವೃಶ್ಚಿಕ 7°9′ ಆಗುತ್ತದೆ. ವಾಸ್ತವವಾಗಿ ಲಗ್ನರಾಶಿಯಿಂದ ನಾವು ಎಣಿಸಬೇಕಾಗಿರುವ ಕಾರಣ (ಲಗ್ನರಾಶಿಯ ಮೊದಲನೆಯ ಡಿಗ್ರಿಯಿಂದ) $30 + 174 = 204°$ = ತುಲಾ24° ಲಭಿಸುತ್ತದೆ.

ಜನನ ಕಾಲವು ಸೂರ್ಯೋದಯವಾದ ತರುವಾಯ 14.5 ಘಟಿಗಳು.
ಜನನ ಕಾಲವನ್ನು 2.5ರಿಂದ ಭಾಗಿಸಿದರೆ,

$\frac{14.5}{2.5}$ ಭಾಗಲಬ್ಧವಾಗಿ 5 ದೊರಕುತ್ತದೆ, ಶೇಷ 0.8.

ಲಗ್ನವು ಸಮವಾದ ಕಾರಣ, ಆರನೆಯದು (5+1) ಅಂದರೆ ತುಲ ಹೋರಾ ಲಗ್ನವಾಗುತ್ತದೆ. ಶೇಷವಾದ 0.8ನ್ನು 30ರಿಂದ ಗುಣಿಸಿದರೆ 24° ಬರುತ್ತದೆ.

∴ ಹೋರಾ ಲಗ್ನ = ತುಲ 24°.

## 21. ಭಾವಲಗ್ನ*

ಜನ್ಮಲಗ್ನವು ಬೆಸನಾದರೆ ಸೂರ್ಯನಿಂದಲೂ ಸಮನಾದರೆ ಲಗ್ನದಿಂದಲೂ ಭಾಗಲಬ್ಧಕ್ಕೆ ಒಂದು ಅಂಕವನ್ನು ಸೇರಿಸಿ ಎಣಿಸಿದರೆ ಭಾವ ಲಗ್ನವು ದೊರೆಯುತ್ತದೆ. ಜನನ ಕಾಲವನ್ನು 5ರಿಂದ ಭಾಗಿಸಿದರೆ ಸಲ್ಲುವ ಪೂರ್ಣಾಂಕವೇ ಭಾಗಲಬ್ಧ. ಶೇಷವನ್ನು ಡಿಗ್ರಿಗಳಿಗೆ ಪರಿವರ್ತಿಸಿದರೆ ಭಾವ ಲಗ್ನದ ಖಚಿತವಾದ ಸ್ಪಷ್ಟ ದೊರೆಯುತ್ತದೆ.

ನಾಲ್ಕನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಭಾವಲಗ್ನವನ್ನು ಕಂಡುಹಿಡಿಯಿರಿ.**

ಜನ್ಮಲಗ್ನವು ವೃಷಭ. ಅದು ಸಮರಾಶಿ.
ಜನನ ಕಾಲ = 14.5 ಘಟಿಗಳು.

$\frac{14.5}{5}$ = 2.9 = ಭಾಗಲಬ್ಧ 2 : ಶೇಷ = 0.9

∵ ಜನ್ಮಲಗ್ನವು ಸಮರಾಶಿಯಾದ ಕಾರಣ, ಭಾವಲಗ್ನವು ಜನ್ಮಲಗ್ನದಿಂದ ಮೂರನೆಯದಾದ ಕರ್ಕಾಟಕ.

---

* ಸೂರ್ಯೋದಯವಾದ ಮೇಲೆ ಸಂದ ಘಟಿಗಳನ್ನು 6ರಿಂದ ಗುಣಿಸಿ ಬಂದ ಅಂಕವನ್ನು ಲಗ್ನವು ಬೆಸನಾದರೆ ಸೂರ್ಯನ ಸ್ಪಷ್ಟಕ್ಕೂ, ಸಮನಾದರೆ ಲಗ್ನಕ್ಕೂ ಸೇರಿಸಿದರೆ ಭಾವಲಗ್ನವನ್ನು ಗಣಿತದ ಪ್ರಕಾರ ಪಡೆಯಬಹುದು. ಮಾದರಿ ಜಾತಕದಲ್ಲಿ, ಜನನ ಘಟಿ×6 = 87°, ಲಗ್ನದ ಸ್ಪಷ್ಟವಾದ 43°9′ಕ್ಕೆ ಇದನ್ನು ಸೇರಿಸಿದರೆ 130°9′ = ಸಿಂಹ 10°9′ ಭಾವಲಗ್ನವಾಗಿ ದೊರೆಯುತ್ತದೆ. ವಾಸ್ತವವಾಗಿ 87°ನ್ನು ಲಗ್ನದ ಮೊದಲನೆಯ ಡಿಗ್ರಿಗೆ ಸೇರಿಸಬೇಕು. 30+87 = 117 = ಕರ್ಕಾಟಕ 27°.

ಶೇಷವನ್ನು 30ರಿಂದ ಗುಣಿಸಿದರೆ 27° ಬರುತ್ತದೆ. ಅದು ಭಾವ ಲಗ್ನದ ಖಚಿತ ಅಕ್ಷಾಂಶ.

∴ ಭಾವಲಗ್ನ = ಕರ್ಕಾಟಕ 27°.

## 22. ವರ್ಣದ ಲಗ್ನ

ಜನ್ಮಲಗ್ನವು ಬೆಸರಾಶಿಯಾದರೆ, ಮೇಷದಿಂದ ಗಡಿಯಾರ ತಿರುಗುವ ನೇರಕ್ಕೆ ಜನ್ಮಲಗ್ನದವರೆಗೆ ಎಣಿಸಿ. ಜನ್ಮಲಗ್ನವು ಸಮರಾಶಿಯಾದರೆ, ಗಡಿಯಾರಕ್ಕೆ ಪ್ರತಿಯಾಗಿ (ಅಪಸವ್ಯ) ಮಾನದಿಂದ ಜನ್ಮಲಗ್ನದವರೆಗೆ ಎಣಿಸಿ. ಇದನ್ನು **ಅ** ಅನ್ನಿ. ಹಾಗೆಯೇ ಹೋರಾ ಲಗ್ನವು ಬೆಸವೋ ಸಮವೊ ಆಗಿದ್ದ ಹಾಗೆ ಮೇಷದಿಂದ ಸವ್ಯವಾಗಿಯೋ ಮೀನದಿಂದ ಅಪಸವ್ಯವಾಗಿಯೋ ಎಣಿಸಿ. ಇದನ್ನು **ಇ** ಎನ್ನಿ. ಜನ್ಮಲಗ್ನ ಹೋರಾ ಲಗ್ನಗಳೆರಡೂ ಏಕಪ್ರಕಾರವಾಗಿ ಬೆಸವಾಗಿಯೋ ಸಮನಾಗಿಯೋ ಇದ್ದರೆ ಅ ಮತ್ತು ಇ ಮೊತ್ತವನ್ನು ತೆಗೆದು ಕೊಳ್ಳಿ. ಒಂದು ಬೆಸ, ಒಂದು ಸಮ ಆದರೆ, **ಅ** ಮತ್ತು ಇ ಅಂತರವನ್ನು ತೆಗೆದುಕೊಳ್ಳಿ. ಅದನ್ನು **ಉ** ಅನ್ನಿ. 12ರ ಅಪವರ್ತ್ಯಗಳನ್ನು ತ್ಯಜಿಸಿ. ಜನ್ಮ ರಾಶಿಯು ಬೆಸನಾದರೆ ಮೇಷದಿಂದ ಗಡಿಯಾರದಂತೆಯೂ ಸಮನಾದರೆ ಮೀನದಿಂದ ಗಡಿಯಾರಕ್ಕೆ ಪ್ರತಿಯಾಗಿ **ಉ** ಸಲ ಎಣಿಸಿದರೆ ವರ್ಣದ ಲಗ್ನ ಸಿಗುತ್ತದೆ.

ಐದನೆಯ ಉದಾಹರಣೆ: **ಮಾದರಿ ಜಾತಕದಲ್ಲಿ ವರ್ಣದ ಲಗ್ನವನ್ನು ಕಂಡುಹಿಡಿಯಿರಿ.**

ಜನ್ಮಲಗ್ನವು ವೃಷಭ, ಸಮರಾಶಿ. ಹೋರಾ ಲಗ್ನವು ತುಲ, ಬೆಸರಾಶಿ.

∴ ಅ = 11 (ಮೀನದಿಂದ ಅಪಸವ್ಯವಾಗಿ ಜನ್ಮಲಗ್ನದವರೆಗೆ ಎಣಿಸಿದರೆ)

ಇ = 7 (ಮೇಷದಿಂದ ಸವ್ಯವಾಗಿ ಹೋರಾ ಲಗ್ನದವರೆಗೆ ಎಣಿಸಿದರೆ)

∵ ಜನ್ಮಲಗ್ನವು ಸಮ ಮತ್ತು ಹೋರಾ ಲಗ್ನವು ಬೆಸ ಆದಕಾರಣ.

ಅ–ಇ = ಉ (12ರ ಅಪವರ್ತ್ಯಗಳನ್ನು ತ್ಯಜಿಸಿದರೆ)

11–7 = 4 (12ರ ಅಪವರ್ತ್ಯಗಳನ್ನು ತ್ಯಜಿಸಿದರೆ)

ಜನ್ಮಲಗ್ನವು ಸಮರಾಶಿಯಾದ ಕಾರಣ, ಮೀನದಿಂದ ಗಡಿಯಾರ ಕ್ರಮಕ್ಕೆ ಪ್ರತಿಯಾಗಿ ನಾಲ್ಕನೆಯ ರಾಶಿಯಾದ ಧನುಸ್ ವರ್ಣಲಗ್ನವಾಗುತ್ತದೆ.

## 23. ಇತರ ರಾಶಿಗಳಿಗೂ ವರ್ಣದ ಲಗ್ನ ನಿಷ್ಕರ್ಷೆ

ಜನ್ಮಲಗ್ನಕ್ಕೆ ವರ್ಣದ ಲಗ್ನವನ್ನು ನಿಷ್ಕರ್ಷಿಸಿದಂತೆ, ಇತರೆ 11 ಭಾವಗಳಿಗೂ ಆಯಾ ರಾಶಿಯನ್ನು ಲಗ್ನವೆಂದು ಭಾವಿಸಿ, ಅದಕ್ಕೆ ಅನುಗುಣವಾದ ವರ್ಣದ ಲಗ್ನವನ್ನು ಗುಣಿಸಬಹುದು. ಎರಡನೆಯ ರಾಶಿಗೆ ವರ್ಣದ ಬೇಕಾದರೆ, ಅದನ್ನು ಲಗ್ನವೆಂದು ಭಾವಿಸಿ. ಹೋರಾ ಲಗ್ನವಾದ ಎರಡನೆಯ ರಾಶಿಯು ವರ್ಣದ ಲೆಕ್ಕಾಚಾರಕ್ಕೆ ಹೋರಾ ಲಗ್ನವಾಗುತ್ತದೆ. ಮೂರನೆಯ ರಾಶಿಗೆ ವರ್ಣದ ಬೇಕಾದರೆ ಹೋರಾ ಲಗ್ನದಿಂದ ಮೂರನೆಯದು ಹೋರಾ ಲಗ್ನವಾಗುತ್ತದೆ. ಇದೇ ರೀತಿಯಲ್ಲಿ ಇತರೇ ಭಾವಗಳಿಗೂ ಕೂಡ ಕಂಡು ಹಿಡಿಯಬೇಕು.

ಆರನೆಯ ಉದಾಹರಣೆಗೆ : **ಮಾದರಿ ಜಾತಕದಲ್ಲಿ ಎರಡನೆಯ ರಾಶಿಗೆ ವರ್ಣದ ಲಗ್ನವನ್ನು ಕಂಡುಹಿಡಿಯಿರಿ.**

ಎರಡನೆಯ ರಾಶಿಯು ಮಿಥುನ, ಬೆಸರಾಶಿ.

ಎರಡನೆಯ ರಾಶಿಯಿಂದ ಹೋರಾಲಗ್ನ ವೃಶ್ಚಿಕ, ಸಮರಾಶಿ.

∴ ಅ = 3 (ಎರಡನೆಯ ರಾಶಿಯಾದ ಮಿಥುನದವರೆಗೆ ಮೀನದಿಂದ ಗಡಿಯಾರದಂತೆ ಎಣಿಸಿದರೆ)

ಆ = 5 (ಹೋರಾ ಲಗ್ನದಿಂದ ಎರಡನೆಯ ರಾಶಿಯಾದ ವೃಶ್ಚಿಕದವರೆಗೆ ಮೀನದಿಂದ ಅಪಸವ್ಯ ಎಣಿಸಿದರೆ)

∴ ಎರಡನೆಯ ರಾಶಿಯು ಬೆಸ, ಹೋರಾದಿಂದ ಎರಡನೆಯ ರಾಶಿ ಸಮ.

ಅ ಮತ್ತು ಆ ಎರಡರ ವ್ಯತ್ಯಾಸವನ್ನು ತೆಗೆದುಕೊಳ್ಳಿ, $= 5-3 = 2$.

ಎರಡನೆಯ ರಾಶಿಯು ಬೆಸನಾದ ಕಾರಣ, ಮೇಷದಿಂದ ಸವ್ಯ ಕ್ರಮದಲ್ಲಿ ಎರಡನೆಯದಾದ ವೃಷಭವು ಎರಡನೆಯ ರಾಶಿಗೆ ವರ್ಣದಲಗ್ನವಾಗುತ್ತದೆ. ವಿವಿಧ ರಾಶಿಗಳಿಗೆ ವರ್ಣದ ಲಗ್ನಗಳು ವರ್ಣದ ದೆಶೆಯನ್ನು ಗುಣಿಸಲು ಬೇಕಾಗುತ್ತದೆ. (95 ನೇ ವಿಭಾಗ ನೋಡಿ).

## 24. ಘಟಿಕಾ ಲಗ್ನ *

ಜನನ ಘಟಿಕಗಳನ್ನು 12ರಿಂದ ಭಾಗಿಸಿ, ಭಾಗಲಬ್ಧವನ್ನು ತ್ಯಜಿಸಿ. ಶೇಷದ ಪೂರ್ಣಾಂಕಕ್ಕೆ ಒಂದನ್ನು ಸೇರಿಸಿ ಜನ್ಮಲಗ್ನದಿಂದ ಎಣಿಸಿದರೆ ಘಟಿಕಾ

* ಗಣಿತದ ಪ್ರಕಾರ ಪ್ರತಿ ಘಟಿಯೂ 30ಂಗಳಿಗೆ ಸಮವಾಗುತ್ತದೆ. ಆದ್ದರಿಂದ ಸೂರ್ಯೋದಯದ ನಂತರ ಸಂದ ಜನನ ಘಟಿಗಳನ್ನು 30ರಿಂದ ಗುಣಿಸಿ ಅದಕ್ಕೆ

ಲಗ್ನ ಸಿಗುತ್ತದೆ. ಶೇಷದ ಭಿನ್ನಾಂಕವನ್ನು ಡಿಗ್ರಿಗಳಿಗೆ ಪರಿವರ್ತಿಸಿದರೆ, ಅಕ್ಷಾಂಶವು ಕರಾರುವಾಕ್ಕಾಗಿ ಸಿಗುತ್ತದೆ.

ಏಳನೆಯ ಉದಾಹರಣೆ : **ಮೂದಲ ಜಾತಕದಲ್ಲಿ ಘಟಿಕಾ ಲಗ್ನವನ್ನು ಕಂಡುಹಿಡಿಯಿರಿ.**

ಜನ್ಮ ಲಗ್ನವು ವೃಷಭ

ಜನನ ಘಟಿ $= 14.5$

ಜನನ ಘಟಿಯನ್ನು 12ರಿಂದ ಭಾಗಿಸಿದರೆ

$\frac{14.5}{12} = 2.5$ ಶೇಷ ದೊರಕುತ್ತದೆ.

ಇದರಲ್ಲಿ ಪೂರ್ಣಾಂಕ 2; ಭಿನ್ನಾಂಕ 0.5 ; ಘಟಿಕಾ ಲಗ್ನವು ಜನ್ಮ ಲಗ್ನದಿಂದ ಮೂರನೆಯ $(2+1)$ದಾದ ಕರ್ಕಾಟಕ. ಶೇಷದ ಭಿನ್ನಾಂಕವಾದ 0.5ನ್ನು ಡಿಗ್ರಿಗಳಾಗಿ ಪರಿವರ್ತಿಸಿದರೆ 15 ಆಗುತ್ತದೆ.

$\therefore$ ಘಟಿಕಾ ಲಗ್ನ $=$ ಕರ್ಕಾಟಕ $15^\circ$

## 25. ನಿಷೇಕ ಅಥವಾ ಆಧಾನ ಲಗ್ನ

ಇದು ಗರ್ಭಧಾರಣೆಯ ಕಾಲದಲ್ಲಿರುವ ಲಗ್ನದ ರಾಶಿ. ಜ್ಯೋತಿಷಿಕ ಸ್ಫೂರ್ತಿಗಾಗಿ ಪಶ್ಚಿಮದ ಕಡೆಗೇ ನೋಡುವ ಕೆಲವು ಮಂದಿ ಜ್ಯೋತಿಷಾ ಭ್ಯಾಸಿಗಳಿಗೆ, ಜನನ ಪೂರ್ವದ ಜ್ಯೋತಿಷ ವಿಭಾಗವು ಪಾಶ್ಚಾತ್ಯರಲ್ಲಿ ಮೊದಲು ಬೆಳೆಯಿತು ಎಂಬ ನಂಬಿಕೆ ಪಬ್ಬಿದೆ. ಈ ತಪ್ಪು ಕಲ್ಪನೆ ಭಾಗಶಃ ಅಜ್ಞಾನದಿಂದ ಉಂಟಾಗಿದೆ. ಭಾಗಶಃ ಜ್ಯೋತಿಷಿಕ ತತ್ತ್ವಗಳಿಗೂ ಜೈವಿಕ ವ್ಯಾಪಾರಗಳಿಗೂ ಇರುವ ಅನುಸಂಬಂಧವನ್ನು ನಮ್ಮ ಪ್ರಾಚೀನರು ಕಲ್ಪಿಸಿಕೊಂಡಿರಲಿಕ್ಕೆ ಸಾಧ್ಯ ವಿಲ್ಲ—ಎಂಬ ಪೂರ್ವಗ್ರಹ ಪೀಡೆಯಿಂದಲೂ ಉಂಟಾಗಿದೆ. ಅಂಥ ಅರೆ ಬೆಂದ ಪಂಡಿತರಿಗೆ ಆಶಾಭಂಗವಾಗುವಂತೆ, ನಮ್ಮ ಪ್ರಾಚೀನ ಜ್ಯೋತಿಷಿಕ

---

ಲಗ್ನದ ಅಂಶವನ್ನು ಸೇರಿಸಿದರೆ, ಘಟಿಕಾ ಲಗ್ನ ದೊರಕುತ್ತದೆ. ಮೂದಲ ಜಾತಕ ದಲ್ಲಿ ಗಣತದ ಪ್ರಕಾರವಾಗಿ ಗುಣಿಸಿದರೆ ಘಟಿಕಾ ಲಗ್ನವು ಹೀಗೆ ದೊರೆಯುತ್ತದೆ.

$428^\circ 9' - 118^\circ 9' =$ ಕರ್ಕಾಟಕ $28^\circ 9'$

$= 425^\circ + 43^\circ 9' = (14.5 + 30)\ 43^\circ 9'$

ವಾಸ್ತವವಾಗಿ ಜನನ ಘಟಿಕೆಗಳನ್ನು 30ರಿಂದ ಗುಣಿಸಿ ಲಗ್ನದ ಮೊದಲ ಅಂಶಕ್ಕೆ ಸೇರಿಸಬೇಕೆಂದು ಹೇಳಿದೆ. ಇದರ ಪ್ರಕಾರ ಘಟಿಕಾ ಲಗ್ನವು ಕರ್ಕಾಟಕ $15^\circ$ ಆಗುತ್ತದೆ.

ಗ್ರಂಥಗಳಲ್ಲಿ ಗರ್ಭಾದಾನ ಲಗ್ನವನ್ನೂ ಜನ್ಮಲಗ್ನಕ್ಕೂ ಅದಕ್ಕೂ ಇರುವ ಸಂಬಂಧವನ್ನೂ ಕುರಿತ ಪ್ರಸ್ತಾಪಗಳು ಪದೇ ಪದೇ ದೊರಕುತ್ತವೆ, ಮತ್ತು ಆಧಾನಲಗ್ನವನ್ನು ಆಧರಿಸಿ ವ್ಯಕ್ತಿಯ ಭವಿಷ್ಯಕ್ಕೆ ಸಂಬಂಧಪಟ್ಟಂತೆ ಸಾಕಷ್ಟು ಕರಾರುವಾಕ್ಕಾಗಿ ಫಲ ಹೇಳಬಹುದು ಎಂಬ ಪ್ರಸ್ತಾಪಗಳೂ ದೊರಕುತ್ತವೆ. ಈ ಪ್ರದೀಪಿಕೆಯಲ್ಲಿ ನಾನು ನಿಷೇಕಲಗ್ನವನ್ನು ಕುರಿತು ಆಮೂಲಾಗ್ರವಾಗಿ ಚರ್ಚಿಸುವುದಿಲ್ಲ. ಪರಾಶರ ಪ್ರಣೀತವಾದ ತತ್ತ್ವವನ್ನು ಪ್ರಾಸಂಗಿಕವಾಗಿ ಚರ್ಚಿಸುತ್ತೇನೆ. ಹೆಚ್ಚಿನ ವಿವರಕ್ಕೆ **ಬೃಹತ್ ಪರಾಶರ ಹೋರಾ** ಗ್ರಂಥವನ್ನು ಅವಲೋಕಿಸತಕ್ಕದು.

## 26. ಪರಾಶರ ವಿಧಾನ

ಜನ್ಮಲಗ್ನದಿಂದ ಗರ್ಭಲಗ್ನವನ್ನು ಕಂಡುಹಿಡಿಯಲು ಜೈಮಿನಿಯು ಯಾವೊಂದು ವಿಧಾನವನ್ನೂ ಪ್ರತಿಪಾದಿಸುವುದಿಲ್ಲ. ಆದಕಾರಣ ಪರಾಶರ ವಿಧಾನವನ್ನು ಕುರಿತು ಹೇಳುತ್ತೇನೆ. ಆ ವಿಧಾನ ಇದು:— ಪ್ರಥಮದಿಂದ ನವಮದವರೆಗಿನ ಅಂತರಕ್ಕೆ ಸೂರ್ಯನಿಂದ ಮಾಂದಿಗೆ ಆಗುವ ಅಂತರವನ್ನು ಸೇರಿಸಿ, ಸೂರ್ಯನ ಅಂತರವನ್ನು ರಾಶಿಗಳಲ್ಲಿ ಹಿಮ್ಮುಖವಾಗಿ ಎಣಿಸಿದರೆ ಅಷ್ಟು ತಿಂಗಳು ಗರ್ಭಕಾಲಕ್ಕೂ ಜನನ ಕಾಲಕ್ಕೂ ಅಂತರವಿರುತ್ತದೆ.

## 27. ಸಮರಸಿಂಹನ ವಿಧಾನ

**ಮನುಷ್ಯ ಜಾತಕ** ಎಂಬ ಹೆಸರಿನ ತನ್ನ ಕೃತಿಯಲ್ಲಿ ಸಮರಸಿಂಹನು ಆಧಾನಲಗ್ನದ ಪ್ರಸ್ತಾಪ ಮಾಡುತ್ತ ಜನ್ಮ ಕುಂಡಲಿಯಲ್ಲಿ ಆಧಾನಲಗ್ನ ಮತ್ತು ಚಂದ್ರಲಗ್ನ ಇವೆರಡರ ಅಂಶವು ಒಂದೇ ಆಗಿದ್ದರೆ ಗರ್ಭಧಾರಣೆಯ ಕಾಲವು 273 ದಿವಸಗಳಾಗುತ್ತವೆ ಎಂದು ಹೇಳುತ್ತಾನೆ. ಚಂದ್ರನೂ ಲಗ್ನವೂ ಎದುರಾಗಿದ್ದರೆ ಗರ್ಭಕಾಲವು 258 ದಿವಸಗಳಾಗುತ್ತವೆ.

## 28. ಈಗಿರುವ ವಿಧಾನಗಳ ಅಸಮರ್ಪಕ ಸ್ಥಿತಿ

ಈಗ ಪ್ರಚಾರದಲ್ಲಿರುವಂತೆ, ಜನ್ಮಲಗ್ನದಿಂದ ಆಧಾನಲಗ್ನವನ್ನು ಕಂಡುಹಿಡಿಯುವ ಎಲ್ಲಾ ವಿಧಾನಗಳೂ ಅಸಂಬದ್ಧವಾಗಿವೆ ಎಂದು ತೋರು ತ್ತದೆ. ಎಲ್ಲರಿಗೂ ಅಂಗೀಕಾರವಾಗಬಲ್ಲಂಥ ಒಂದು ಕಾರ್ಯವಾಸಿಯಾದ ವಿಧಾನವನ್ನು ಮಂಡಿಸುವುದಕ್ಕೆ ಮುಂಚೆ ವಿಪುಲವಾದ ಸಂಶೋಧನೆಯು

ಕೆಲಸ ನಡೆಯಬೇಕಾಗಿದೆ. ವರಾಹಮಿಹಿರನು ತನ್ನ **ಬೃಹತ್ ಜಾತಕದ** ನಾಲ್ಕನೆಯ ಅಧ್ಯಾಯದ 21ನೆಯ ಶ್ಲೋಕದಲ್ಲಿ ಜನ್ಮಲಗ್ನಕ್ಕೂ ಆಧಾನ ಲಗ್ನಕ್ಕೂ ಇರುವ ಅನುಸಂಬಂಧವನ್ನು ಕುರಿತು ಮಾಡಿರುವ ಪ್ರಸ್ತಾಪದಲ್ಲಿ ಇದಕ್ಕೆ ಸುಳಿವು ಸಿಗುತ್ತದೆ. ಪ್ರಮಾಣಪ್ರಾಯವೂ ಕ್ರಮಬದ್ಧವೂ ಆದ ವಿಧಾನವೊಂದು ಇಲ್ಲದಿರುವ ಕಾರಣ, ಜೈಮಿನಿಯು ನಾಲ್ಕನೆಯ ಅಧ್ಯಾಯದಲ್ಲಿ ಸೂಚಿಸಿರುವ ಗ್ರಹಸಂಬಂಧವನ್ನೇ ನೆಚ್ಚಿಕೆಯಿಂದ ಉಪಯೋಗಿಸಬಹುದು. ಜನ್ಮಕಾಲದಿಂದ ಗರ್ಭಕಾಲವನ್ನೂ ಗರ್ಭಕಾಲದಿಂದ ಜನ್ಮಕಾಲವನ್ನೂ ಗುರುತಿಸುವುದಕ್ಕೆ ಸಂಬಂಧಪಟ್ಟ ತತ್ವಗಳು ಖಗೋಳವಿಜ್ಞಾನ ಜೀವವಿಜ್ಞಾನಗಳನ್ನು ಒಳಗೊಂಡವು. ಇದು ಪಂಡಿತರಿಗೆ ಸಂಶೋಧನೆ ನಡೆಸಲು ವಿಪುಲವಾದ ಕ್ಷೇತ್ರವನ್ನು ಒದಗಿಸುತ್ತದೆ.

## 29. ಪ್ರಾಣಪದ

ಮನುಷ್ಯ, ಪ್ರಾಣಿ ಮತ್ತು ಸಸ್ಯಗಳಲ್ಲಿ ಜನನವು ಕೆಲವು ಖಚಿತವಾದ ಕಾಲಾಂತರಗಳಲ್ಲಿ ಮಾತ್ರ ಉಂಟಾಗಲು ಸಾಧ್ಯ ಎಂಬ ಆವೃತ್ತ ನಿಯಮವನ್ನು ಪ್ರಾಣಪದ ವಾದವು ಆಧರಿಸಿದಂತೆ ಕಾಣುತ್ತದೆ. ಇದರಿಂದಾಗಿ ಲಗ್ನಕ್ಕೂ ಪ್ರಾಣಪದ ರಾಶಿಗೂ ಗಮನೀಯವಾದ ಸಂಬಂಧ ಇರುವಂತೆ ಕಾಣುತ್ತದೆ. ಉತ್ತರ ಭಾರತದಲ್ಲಿ ಅನೇಕ ಜ್ಯೋತಿಷಿಗಳು ಜನ್ಮಕಾಲವನ್ನು ಕಂಡುಹಿಡಿಯುವುದಕ್ಕೆ ಪ್ರಾಣಪದ ವಾದವು ಕುರಿತೇಟಾದ ವಿಧಾನ ಎಂದು ಭಾವಿಸಿದ್ದಾರೆ. ಯಾವೊಂದು ಕ್ರಮವೂ ನಿರ್ದಿಷ್ಟವೂ ಅಲ್ಲ, ಸರ್ವತ್ರ ವ್ಯವಹಾರಸಿದ್ಧವೂ ಅಲ್ಲ. ಪ್ರತಿ ಜಾತಕಕ್ಕೂ ವಿಶಿಷ್ಟ ಕೈವಾಡ ಬೇಕಾಗುತ್ತದೆ. ಪರಾಶರ ಮಹರ್ಷಿ ಜನ್ಮಕಾಲವನ್ನು ಖಚಿತವಾಗಿ ನಿಷ್ಕರ್ಷಿಸುವುದಕ್ಕೆ ಪ್ರಾಣಪದ, ಚಂದ್ರ ಮತ್ತು ಗುಳಿಕಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕು ಎಂದು ಸ್ಪಷ್ಟವಾಗಿ ಸೂಚಿಸುತ್ತಾನೆ. ಪ್ರಾಣಪದವು ಜನ್ಮಕಾಲವನ್ನು ಕೆಲವು ರೀತಿಯ ಗಣಿತ ಸಂಸ್ಕಾರಗಳಿಗೆ ಒಳಪಡಿಸುವ ಮೂಲಕ ಲಭಿಸುವ ಸೂಕ್ಷ್ಮ ಅಂಶ.

## 30. ಪ್ರಾಣಪದವನ್ನು ಕಂಡುಹಿಡಿಯುವ ವಿಧಾನ

ಪ್ರಾಣಪದವು, ಜನ್ಮಕಾಲದ ವಿಘಟಿಗಳನ್ನು ದ್ವಿಗುಣಪಡಿಸಿ (1) ಸೂರ್ಯನ ಅಕ್ಷಾಂಶಕ್ಕೂ ಅಥವಾ (2) ಸೂರ್ಯನ ಅಕ್ಷಾಂಶ + 240°

ಗಳಿಗೊ ಅಥವಾ (3) ಸೂರ್ಯನ ಅಕ್ಷಾಂಶ + 120°ಗಳಿಗೊ ಸೂರ್ಯನು, ಚರ, ಸ್ಥಿರ ಅಥವಾ ದ್ವಿಸ್ವಭಾವ ರಾಶಿಯಲ್ಲಿರುವುದಕ್ಕೆ ಅನುಕ್ರಮವಾಗಿ ಸೇರಿಸುವುದರಿಂದ ಲಭ್ಯವಾಗುತ್ತದೆ—ಈ ಲೆಕ್ಕಾಚಾರದಲ್ಲಿ 260°ಗಳ ಅಪವರ್ತ್ಯಗಳನ್ನು (multiples) ತ್ಯಜಿಸಬೇಕು.

ಎಂಟನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಪ್ರಾಣಪದ ಲಗ್ನವನ್ನು ಕಂಡುಹಿಡಿಯಿರಿ.**

ಜನನ ಕಾಲ = 14–30 ಘಳಿಗೆಗಳು = 870 ವಿಘಟಿಗಳು

ಸೂರ್ಯನ ಅಕ್ಷಾಂಶ = 301° 12′ ಅಥವಾ ಕುಂಭ 1° 12′. ಸ್ಥಿರ ರಾಶಿ.

ಮೇಲಿನ ಸೂತ್ರದ ಪ್ರಕಾರ, ಪ್ರಾಣಪದ ಲಗ್ನ ಇದು :

(2 × ಜನನ ಕಾಲ ವಿಘಟಿಗಳು) + (ಸೂರ್ಯನ ಅಕ್ಷಾಂಶ + 240°)

= (2 × 870) + (301° 12′ + 240°)

= 1640° + 541° 12′ = 2281° 12′

360°ರ ಅಪವರ್ತ್ಯಗಳನ್ನು ತ್ಯಜಿಸಿದರೆ, 121° 12′ ದೊರೆಯುತ್ತದೆ.

∴ ಪ್ರಾಣಪದ ಲಗ್ನ = ಸಿಂಹ 1° 12′

## 31. ದ್ವಾರ ರಾಶಿ

ಯಾವ ರಾಶಿಯಲ್ಲಿ ಯಾವುದಾದರೂ ದಶೆಯು ಪ್ರಾರಂಭವಾಗುವ ರಾಶಿ ಅಥವಾ ಯಾವ ರಾಶಿಯ ದಶೆಯು ನಡೆಯುತ್ತಿದೆಯೋ ಅದು ದ್ವಾರ ರಾಶಿ.

ಮಾರಕವನ್ನು ಕಂಡುಹಿಡಿಯುವ ಸಲುವಾಗಿಯೋ ಅಥವಾ ಬೇರಾವ ಸಂಬಂಧವಾಗಿಯೋ ಮೇಷ ರಾಶಿಯ ದಶಾ ಅವಗಾಹನೆಯಲ್ಲಿದೆ ಅನ್ನಿ. ಆಗ ಆ ರಾಶಿಯು ದ್ವಾರ ರಾಶಿಯಾಗುತ್ತದೆ.

## 32. ಬಾಹ್ಯ ರಾಶಿ

ಲಗ್ನದಿಂದ ದ್ವಾರರಾಶಿಯು ಎಷ್ಟು ರಾಶಿಗಳಷ್ಟು ಆಚೆಯಿರುತ್ತದೆಯೋ ದ್ವಾರರಾಶಿಯಿಂದ ಅಷ್ಟು ರಾಶಿಗಳಷ್ಟು ದೂರವಿರುವ ರಾಶಿಗೆ ಬಾಹ್ಯರಾಶಿಯೆಂದು ಹೆಸರು. ಲಗ್ನವು ಕರ್ಕಾಟಕ ಅನ್ನಿ, ಮಾರಕ ನಿಷ್ಕರ್ಷೆ ಮಾಡಬೇಕಾಗಿರುವ ರಾಶಿಯು ತುಲಾ ಎಂದಿಟ್ಟುಕೊಳ್ಳಿ. ಆಗ ತುಲಾ ದ್ವಾರ ರಾಶಿ

ಯಾಗುತ್ತದೆ. ತುಲಾ, ಲಗ್ನದಿಂದ ನಾಲ್ಕನೆಯ ರಾಶಿಯಾಗಿರುವ ಕಾರಣ, ತುಲಾದಿಂದ ನಾಲ್ಕನೆಯದಾದ ಮಕರವು ಬಾಹ್ಯ ರಾಶಿಯಾಗುತ್ತದೆ. ಆದ್ದರಿಂದ ದ್ವಾರವು ಲಗ್ನದಿಂದ ಎರಡನೆಯದಾದರೆ, ಬಾಹ್ಯವು ಮೂರನೆಯದು.

| | | | | |
|---|---|---|---|---|
| ದ್ವಾರವು | ಮೂರನೆಯ | ರಾಶಿಯಾದರೆ | ಬಾಹ್ಯವು | ಐದನೆಯದು |
| " | ನಾಲ್ಕನೆಯ | " | " | ಏಳನೆಯದು |
| " | ಐದನೆಯ | " | " | ಒಂಬತ್ತನೆಯದು |
| " | ಆರನೆಯ | " | " | ಹನ್ನೊಂದನೆಯದು |
| " | ಏಳನೆಯ | " | " | ಒಂದನೆಯದು |
| " | ಎಂಟನೆಯ | " | " | ಮೂರನೆಯದು |
| " | ಒಂಬತ್ತನೆಯ | " | " | ಐದನೆಯದು |
| " | ಹತ್ತನೆಯ | " | " | ಏಳನೆಯದು |
| " | ಹನ್ನೊಂದನೆಯ | " | " | ಒಂಬತ್ತನೆಯದು |
| " | ಹನ್ನೆರಡನೆಯ | " | " | ಒಂದನೆಯದು |

**33. ಪಾಕ ರಾಶಿ ಮತ್ತು ಭೋಗ ರಾಶಿ**

ಭೋಗ ರಾಶಿಯನ್ನು ಪಾಕ ರಾಶಿಯೆಂದೂ ಬಾಹ್ಯರಾಶಿಯನ್ನು ಭೋಗ ರಾಶಿಯೆಂದೂ ಕರೆಯುತ್ತಾರೆ. ಇವೆರಡು ರಾಶಿಗಳೂ ಆಯುರ್ದಾಯವನ್ನು ನಿಷ್ಕರ್ಷಿಸುವಾಗ ಮುಖ್ಯವಾಗಿ ಉಪಯುಕ್ತವಾಗಿ ಕಂಡುಬರುತ್ತವೆ.

**34. ಗುಳಿಕ**

ವೃತ್ತಿ ನಿಷ್ಕರ್ಷೆ ವಿಷಯವಾಗಿ ಜೈಮಿನಿಯು ಗುಳಿಕ ಉಪಗ್ರಹವನ್ನು ಕುರಿತು ಆಗಿಂದಾಗ್ಗೆ ಪ್ರಸ್ತಾಪ ಮಾಡುತ್ತಾನಾದ ಕಾರಣ ಗುಳಿಕ ಸ್ಥಾನ ಮುಖ್ಯವಾದುದು. ಗುಳಿಕ ಸ್ಥಾನವನ್ನು ನಿಷ್ಕರ್ಷಿಸುವುದು ಹೀಗೆ : ಅಹಃ ಪ್ರಮಾಣಗಳನ್ನು ಎಂಟು ಸಮಭಾಗಗಳನ್ನಾಗಿ ಮಾಡಿ. ಮೊದಲ ಏಳು ಭಾಗಗಳಿಗೂ ಸಂಬಂಧಪಟ್ಟ ವಾರದ ಅಧಿಪತಿಯಿಂದ ಹಿಡಿದು ಕ್ರಮವಾಗಿ ಏಳು ಗ್ರಹಗಳು ನಾಯಕರಾಗುತ್ತಾರೆ. ಎಂಟನೆಯ ಭಾಗಕ್ಕೆ ಯಾವ ನಾಯಕನೂ ಇಲ್ಲ. ಶನಿಯ ವಿಭಾಗದ ಕಡೆಯ ಅಂಶದಲ್ಲಿ ಯಾವ ಲಗ್ನ ಉದಯವಾಗುತ್ತದೆಯೋ ಅದರ ಅಕ್ಷಾಂಶವೇ ಗುಳಿಕಾಂಶ. ಶುಕ್ರವಾರದ ದಿವಸ ಗುಳಿಕಾ ಸ್ಥಾನ ಬೇಕಾಗಿರುತ್ತದೆ ಅನ್ನಿ. ಅವತ್ತಿನ ಅಹಃಪ್ರಮಾಣ

30 ಘಟಿಗಳು. ಪ್ರತಿ ಎಂಟನೆಯ ಒಂದು ಭಾಗದ ಅವಧಿಯೂ $3\frac{3}{4}$ ಘಟಿಯಾಗುತ್ತದೆ. ಮೊದಲ ಭಾಗದ ಅಧಿಪತಿ ಶುಕ್ರ, ಎರಡನೆಯ ಭಾಗದ (ಏಳೂವರೆ ಘಟಿವರೆಗೆ) ಅಧಿಪತಿ ಶನಿ, ಆದಕಾರಣ ಸೂರ್ಯೋದಯಾದಿ ಏಳೂವರೆ ಘಟಿಗಳ ಕಾಲದಲ್ಲಿ ಉದಯಾಗುವ ಡಿಗ್ರಿಯೇ ಗುಳಿಕದ ಅಕ್ಷಾಂಶ. ರಾತ್ರಿ ಜನನದ ಬಾಬಿನಲ್ಲಿ, ರಾತ್ರಿ ಪ್ರಮಾಣವನ್ನು ಎಂಟು ಭಾಗ ಮಾಡಿ. ಮೊದಲ ಏಳು ಭಾಗಗಳನ್ನು ಕುರುತುಕೊಂಡ ವಾರದಿಂದ ಐದನೆಯ ವಾರದ ಅಧಿಪತಿಯು ಮೊದಲುಗೊಂಡು ಏಳು ಗ್ರಹಗಳು ಆಗುತ್ತವೆ. ಎಂಟನೆಯದಕ್ಕೆ ಅಧಿಪತಿಯಿಲ್ಲ. ಇಲ್ಲೂ ಕೂಡ ಶನಿಯ ಭಾಗದ ಕಡೆಗೆ ಸಲ್ಲುವ ಅಕ್ಷಾಂಶವೇ ಗುಳಿಕ ಸ್ಥಾನ.

ಒಂಬತ್ತನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಗುಳಿಕ ಯಾವ ರಾಶಿಯಲ್ಲಿರುವುದೊ ಕಂಡುಹಿಡಿಯಿರಿ.**

ಅಹಃಪ್ರಮಾಣ 28–4 ಘಟಿಗಳು. ಇದನ್ನು ಎಂಟರಿಂದ ಭಾಗಿಸಿದರೆ 3.55 ಘಟಿಗಳು ದೊರಕುತ್ತವೆ.

ಜನನದ ವಾರ ಮಂಗಳವಾರ.

∴ ಶನಿಯ ಭಾಗವು 14.12ರಿಂದ 17.45 ಘಟಿಗಳವರೆಗೆ ಇರುತ್ತದೆ. ಗುಳಿಕ ಸ್ಥಾನವು 17–45 ಘಟಿಗಳ ಅಂದರೆ ಮಿಥುನ 40° 26'ಕ್ಕೆ ಸರಿ ಹೋಗುತ್ತದೆ.

## 35. ಬ್ರಹ್ಮ

ಸ್ಥಿರದೆಶೆಯನ್ನು ಕಂಡುಹಿಡಿಯುವಾಗ (91ನೆಯ ಅಂಕವನ್ನು ನೋಡಿ) ಮತ್ತು ಮಾರಕ ಕಾಲವನ್ನು ಕಂಡುಹಿಡಿಯುವಾಗ ಬ್ರಹ್ಮ ಸ್ಥಾನವನ್ನು ಹೊಂದುವ ಗ್ರಹವು ಮುಖ್ಯಪಾತ್ರ ವಹಿಸುತ್ತದೆ. ಕೆಲವು ಅರ್ಹತೆಗಳಿಂದ ಒಂದು ಗ್ರಹವು ಪಡೆಯುವ ಪ್ರಶಸ್ತಿಯೇ ಬ್ರಹ್ಮಪಟ್ಟ. ವಿವರ ಹೀಗೆ :

1. ಆತ್ಮಕಾರಕನಿಂದ ಎಂಟನೆಯ ಸ್ಥಾನದ ಅಧಿಪತಿಯು ಅಲ್ಲಿಂದ ಎಂಟನೆಯ ಸ್ಥಾನದಲ್ಲಿದ್ದರೆ, ಬ್ರಹ್ಮಸ್ಥಾನವನ್ನು ಪಡೆಯುತ್ತಾನೆ.

2. ಲಗ್ನ ಮತ್ತು ಸಪ್ತಮ ಇವೆರಡರಲ್ಲಿ ಯಾವುದು ಪ್ರಬಲ ಎಂಬುದನ್ನು ಕಂಡುಹಿಡಿಯಿರಿ. ಅದನ್ನು ಅ ಎನ್ನಿ.

3. ಆ ಸ್ಥಾನದಿಂದ ಆರನೆಯ, ಎಂಟನೆಯ ಮತ್ತು ಹನ್ನೆರಡನೆಯ ಅಧಿಪತಿಗಳ ಪೈಕಿ ಯಾರು ಅತ್ಯಂತ ಪ್ರಬಲರು ಎಂಬುದನ್ನು ಕಂಡುಹಿಡಿಯಿರಿ, ಅದನ್ನು ಇ ಎನ್ನಿ.

ಭಚಕ್ರದ ದೃಗ್ಗೋಚರವಾದ ಅರ್ಧಭಾಗಕ್ಕೆ* ಅನ್ವಯವಾಗುವಂತೆ ಬೆಸರಾಶಿಯಲ್ಲಿ ಇ ಗ್ರಹವು ಇದ್ದರೆ, ಅದೇ ಬ್ರಹ್ಮ.

## 36. ವಿನಾಯಿತಿಗಳು

ಶನಿ, ರಾಹು ಅಥವಾ ಕೇತು 35ನೆಯ ಅಂಕದ ಪ್ರಕಾರ ಬ್ರಹ್ಮಸ್ಥಾನಕ್ಕೆ ಅರ್ಹತೆ ಪಡೆದರೆ, ಅದು ಕೇವಲ ನಾಮಕಾವಸ್ತೆ ಅರ್ಹತೆಯಾದ ಕಾರಣ ಅನರ್ಹನಾಗುತ್ತಾನೆ. ಆಗ್ಗೆ, ನಿಜವಾದ ಬ್ರಹ್ಮ ನಾಮಕಾವಸ್ತೆ ಬ್ರಹ್ಮನಿಂದ ಆರನೆಯ ಗ್ರಹವಾಗುತ್ತಾನೆ. ಎಣಿಕೆಯ ಕ್ರಮ—ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು.

## 37. ಬ್ರಹ್ಮನ ಆಯ್ಕೆ

ಎರಡು ಅಥವಾ ಮೂರು ಗ್ರಹಗಳು ಬ್ರಹ್ಮಸ್ಥಾನಕ್ಕೆ ಅರ್ಹರಾದರೆ, ಹೆಚ್ಚಿನ ಅಂಶವುಳ್ಳ ಗ್ರಹವನ್ನು ಆಯ್ಕೆ ಮಾಡಿ. ರಾಮ ಬಾಬಿನಲ್ಲಿ ರಾಶಿಯ ಕಡೆಯ ಭಾಗದಿಂದ ಎಣಿಸಬೇಕು. ಬ್ರಹ್ಮಸ್ಥಾನಕ್ಕೆ ಅರ್ಹರಾಗುವ ಎರಡು ಗ್ರಹಗಳಿಗೂ ಒಂದೇ ಅಕ್ಷಾಂಶವಿದ್ದರೆ, ರಾಶಿ ಬಲದ (52ನೇ ಅಂಕ ನೋಡಿ) ಪ್ರಕಾರ ಚುನಾಯಿಸಿ.

ಹತ್ತನೆಯ ಉದಾಹರಣೆ: **ಮಾದರಿ ಜಾತಕದಲ್ಲಿ ಬ್ರಹ್ಮಗ್ರಹವನ್ನು ಕಂಡುಹಿಡಿಯಿರಿ.**

ಲಗ್ನ ಮತ್ತು ಏಳನೆಯ ಮನೆ ಈ ಪೈಕಿ ಲಗ್ನವೇ ಪ್ರಬಲ=ಅ (18ನೆಯ ಉದಾಹರಣೆ)

ಆ ಇಂದ 6, 8, 12ನೆಯ ಅಧಿಪತಿಗಳು ಶುಕ್ರ, ಗುರು, ಕುಜ ಕ್ರಮವಾಗಿ ಆಗುತ್ತಾರೆ.

ಈ ಪೈಕಿ ಗುರುವು ಅತ್ಯಂತ ಪ್ರಬಲ. ಏಕೆಂದರೆ ಅವನ ಅಕ್ಷಾಂಶವೇ ಅತ್ಯಂತ ಹೆಚ್ಚು (ಇ).

* ಲಗ್ನದಿಂದ ದೃಗ್ಗೋಚರವಾದ ಅರ್ಧಭಾಗ ಅಂದರೆ ದ್ವಾದಶದಿಂದ ಸಪ್ತಮದವರೆಗೆ ಹಿಮ್ಮುಖವಾಗಿ ಎಣಿಕೆಯಾಗುವ ಭಾಗ. 7ನೆಯ ಮನೆಗೆ ದೃಗ್ಗೋಚರಾರ್ಧ ಭಾಗ ಎಂದರೆ ಷಷ್ಠದಿಂದ ಲಗ್ನದವರೆಗೆ.

ಗುರುವು ಬೆಸರಾಶಿಯಲ್ಲಿದ್ದು ದೃಗ್ಗೋಚರವಾದ ಭಚಕ್ರಾರ್ಧದಲ್ಲಿದ್ದಾನೆ. ಆದಕಾರಣ ಗುರುವು ಬ್ರಹ್ಮ.

ಸೂಚನೆ : ಈ ಸ್ಥಾನಕ್ಕೆ ಬೇರೆ ಯಾವ ಗ್ರಹವೂ ಅರ್ಹನಾಗುವುದಿಲ್ಲ.

## 38. ಮಹೇಶ್ವರ

ಆತ್ಮಕಾರಕನಾದ ಅಷ್ಟಮ ಸ್ಥಾನಾಧಿಪತಿಯು ಮಹೇಶ್ವರ. ಆತ್ಮಕಾರಕನಿಂದ ಅಷ್ಟಮ ಸ್ಥಾನಾಧಿಪತಿಯು ಉಚ್ಚನಾಗಿದ್ದರೆ ಅಥವಾ ಸ್ವಕ್ಷೇತ್ರದಲ್ಲಿದ್ದರೆ, ಆಗ ಆತ್ಮಕಾರಕನಿಂದ ಅಷ್ಟಮ ದ್ವಾದಶ ಸ್ಥಾನಾಧಿಪತಿಗಳ ಪೈಕಿ ಮಹೇಶ್ವರನು ಹೆಚ್ಚು ಪ್ರಬಲನಾಗುತ್ತಾನೆ.

ರಾಹು ಕೇತುಗಳು ಆತ್ಮಕಾರಕನನ್ನು ಕೂಡಿದರೆ, ಅಥವಾ ಆತ್ಮಕಾರಕನಿಂದ ಅಷ್ಟಮದಲ್ಲಿದ್ದರೆ, ಆಗ ಸೂರ್ಯನಿಂದ ಷಷ್ಠದಲ್ಲಿರುವ ಗ್ರಹವು ಮಹೇಶ್ವರನಾಗುತ್ತಾನೆ.

ಮಹೇಶ್ವರ ಸ್ಥಾನಕ್ಕೆ ಎರಡು ಅಥವಾ ಮೂರು ಗ್ರಹಗಳು ಪವಣಿಸಿದರೆ, ಆ ಪೈಕಿ ಹೆಚ್ಚು ಪ್ರಬಲನಾದವನನ್ನು ಆಯ್ದುಕೊಳ್ಳಿ.

ಹನ್ನೊಂದನೆಯ ಉದಾಹರಣೆ: **ಮಾದರಿ ಜಾತಕದಲ್ಲಿ ಮಹೇಶ್ವರನನ್ನು ಕಂಡುಹಿಡಿಯಿರಿ.**

ಆತ್ಮಕಾರಕನಿಂದ ಅಷ್ಟಮ ಗ್ರಹ ಬುಧ. ಆದಕಾರಣ ಅವನು ಮಹೇಶ್ವರ. ಅಷ್ಟಮ ಸ್ಥಾನಾಧಿಪತಿ ಉಚ್ಚನಾಗಲಿ ಸ್ವಕ್ಷೇತ್ರನಾಗಲಿ ಅಲ್ಲ. ರಾಹು ಕೇತುಗಳು ಆತ್ಮಕಾರಕನನ್ನು ಕೂಡಿಲ್ಲ ಅಥವಾ ಆತ್ಮಕಾರಕನಿಂದ ಅಷ್ಟಮದಲ್ಲಿಲ್ಲ. ಆದಕಾರಣ ಬೇರೆ ಯಾವ ಪೈಪೋಟಿಗಾರರೂ ಇಲ್ಲ.

## 39. ರುದ್ರ

ಲಗ್ನದಿಂದ ದ್ವಿತೀಯ ಅಷ್ಟಮ ಸ್ಥಾನಾಧಿಪತಿಗಳ ಪೈಕಿ ಅತ್ಯಂತ ಪ್ರಬಲನಾದವನು ರುದ್ರನಾಗುತ್ತಾನೆ. ಇತರನು ಎಂದರೆ ದುರ್ಬಲನು ಪಾಪ ದೃಷ್ಟಿಗೆ ಒಳಗಾಗಿದ್ದರೆ, ನಾಮ ಮಾತ್ರ ಅಥವಾ ಪೂರಕ ರುದ್ರನಾಗುತ್ತಾನೆ.

ಹನ್ನೆರಡನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ರುದ್ರನನ್ನು ಕಂಡುಹಿಡಿಯಿರಿ.**

ಲಗ್ನದಿಂದ ದ್ವಿತೀಯ ಅಷ್ಟಮ ಅಧಿಪತಿಗಳು ಗುರು ಮತ್ತು ಬುಧ. ಬುಧನಿಗಿಂತ ಗುರು ಪ್ರಬಲ. ಆದಕಾರಣ ಗುರುವೇ ರುದ್ರ.

# ದೃಷ್ಟಿಗಳು ಮತ್ತು ಅರ್ಗಳಗಳು

## 40. ದೃಷ್ಟಿ ವಿಚಾರ

ಭಾರತೀಯ ಜ್ಯೋತಿಷದ ಪ್ರಕಾರ, ದೃಗ್ಬಲವನ್ನು ನಿಷ್ಕರ್ಷಿಸುವಾಗ, ದೃಷ್ಟಿಕೇಂದ್ರಗಳನ್ನು ಗಮನಕ್ಕೆ ತೆಗೆದುಕೊಂಡರೂ ಸಾಧಾರಣವಾಗಿ ದೃಷ್ಟಿಯನ್ನು ರಾಶಿಯಿಂದ ರಾಶಿಗೆ ಎಣಿಸುವುದೇ ವಾಡಿಕೆ. ಯಾವ ಗ್ರಹವೂ ತನ್ನ ಮುಂದೆ 30° ಒಳಗಿರುವ ಗ್ರಹವನ್ನಾಗಲಿ, ಭಾವವನ್ನಾಗಲೀ ಮತ್ತು ತನ್ನ ಹಿಂದೆ 60° ಒಳಗಿರುವ ಭಾವವನ್ನಾಗಲೀ ಗ್ರಹವನ್ನಾಗಲೀ ನೋಡುವುದಿಲ್ಲ. ದೃಷ್ಟಿಯು ಮುಂಭಾಗದಲ್ಲಿ 30°ಗಳಿಂದ ಪ್ರಾರಂಭವಾಗಿ 300 ಡಿಗ್ರಿಗಳಷ್ಟಕ್ಕೆ ಮುಕ್ತಾಯವಾಗುತ್ತವೆ.

## 41. ಜೈಮಿನಿ ಪದ್ಧತಿಯಲ್ಲಿ ದೃಷ್ಟಿಗಳು

ಜೈಮಿನಿಯಲ್ಲಿ ದೃಷ್ಟಿಕೇಂದ್ರಗಳನ್ನು ಕಡೆಗಂಡಿರುವಂತೆ ಕಾಣುತ್ತದೆ.

ಎಲ್ಲ ಚರರಾಶಿಗಳೂ ಅಕ್ಕಪಕ್ಕದ ರಾಶಿಗಳನ್ನು ಬಿಟ್ಟು ಎಲ್ಲಾ ಸ್ಥಿರರಾಶಿಗಳನ್ನೂ ನೋಡುತ್ತವೆ. ಎಲ್ಲ ಸ್ಥಿರರಾಶಿಗಳೂ ಅಕ್ಕಪಕ್ಕದ ರಾಶಿಗಳನ್ನು ಬಿಟ್ಟು ಎಲ್ಲ ಚರರಾಶಿಗಳನ್ನೂ ನೋಡುತ್ತವೆ. ದ್ವಿಸ್ವಭಾವ ರಾಶಿಗಳು ಪರಸ್ಪರ ವೀಕ್ಷಿಸುತ್ತವೆ. ನಿರ್ದಿಷ್ಟವಾಗಿ ಹೇಳುವುದಾದರೆ, ಮೇಷರಾಶಿಯು ಸ್ಥಿರರಾಶಿಗಳಾದ ಸಿಂಹ, ವೃಶ್ಚಿಕ, ಕುಂಭಗಳನ್ನು ನೋಡುತ್ತದೆ. ನೆರೆಯ ವೃಷಭವನ್ನು ನೋಡುವುದಿಲ್ಲ. ಹಾಗೆಯೇ ವೃಷಭವು ಕರ್ಕಾಟಕ ತುಲ ಮಕರಗಳನ್ನು ವೀಕ್ಷಿಸಿದರೂ ಮೇಷವನ್ನು ವೀಕ್ಷಿಸುವುದಿಲ್ಲ. ಸುಲಭ ಗ್ರಹಿಕೆಗಾಗಿ ವಿವಿಧ ದೃಷ್ಟಿಗಳನ್ನು ಹೀಗೆ ಕ್ರೋಡೀಕರಿಸಬಹುದು.

| ವೀಕ್ಷಿಸುವ ರಾಶಿ | ವೀಕ್ಷಿತ ರಾಶಿ |
|---|---|
| ಮೇಷ | ಸಿಂಹ, ವೃಶ್ಚಿಕ ಮತ್ತು ಕುಂಭ |
| ವೃಷಭ | ಕರ್ಕಾಟಕ, ತುಲ ಮತ್ತು ಮಕರ |
| ಮಿಥುನ | ಕನ್ಯಾ, ಧನುಸ್ ಮತ್ತು ಮೀನ |
| ಕರ್ಕಾಟಕ | ವೃಶ್ಚಿಕ, ಕುಂಭ ಮತ್ತು ವೃಷಭ |
| ಸಿಂಹ | ತುಲ, ಮಕರ ಮತ್ತು ಮೇಷ |
| ಕನ್ಯಾ | ಧನುಸ್, ಮೀನ ಮತ್ತು ಮಿಥುನ |
| ತುಲ | ಕುಂಭ, ವೃಷಭ ಮತ್ತು ಸಿಂಹ |
| ವೃಶ್ಚಿಕ | ಮಕರ, ಮೇಷ ಮತ್ತು ಕರ್ಕಾಟಕ |
| ಧನುಸ್ | ಮೀನ, ಮಿಥುನ ಮತ್ತು ಕನ್ಯಾ |
| ಮಕರ | ವೃಷಭ, ಸಿಂಹ ಮತ್ತು ವೃಶ್ಚಿಕ |
| ಕುಂಭ | ಮೇಷ, ಕರ್ಕಾಟಕ ಮತ್ತು ತುಲ |
| ಮೀನ | ಮಿಥುನ, ಕನ್ಯಾ ಮತ್ತು ಧನುಸ್ |

## 42. ದೃಷ್ಟಿಯ ವ್ಯಾಪ್ತಿ

ಅಂದರೆ ಚರರಾಶಿಯು ಅಥವಾ ಅದರಲ್ಲಿರುವ ಗ್ರಹವು ಅಲ್ಲಿಂದ ಪಂಚಮ, ಅಷ್ಟಮ, ಏಕಾದಶ ಸ್ಥಾನಗಳನ್ನು ವೀಕ್ಷಿಸುತ್ತದೆ. ಸ್ಥಿರರಾಶಿಯು ಅಥವಾ ಅಲ್ಲಿರುವ ಗ್ರಹವು ಅಲ್ಲಿಂದ ತೃತೀಯ, ಷಷ್ಠ ಮತ್ತು ನವಮಸ್ಥಾನಗಳನ್ನೂ ಮತ್ತು ದ್ವಿಸ್ವಭಾವ ರಾಶಿಯು ಅಥವಾ ಅಲ್ಲಿರುವ ಗ್ರಹವು ಅಲ್ಲಿಂದ ಚತುರ್ಥ, ಸಪ್ತಮ ಮತ್ತು ದಶಮ ಸ್ಥಾನಗಳನ್ನೂ ವೀಕ್ಷಿಸುತ್ತವೆ. ದೃಷ್ಟಿಯ ವ್ಯಾಪ್ತಿಯು ಹೀಗೆ :

(1) ಚರ ರಾಶಿಗಳಿಗೆ ... 120°, 210°, 300°
(2) ಸ್ಥಿರ ರಾಶಿಗಳಿಗೆ ... 60°, 150°, 240°
(3) ದ್ವಿಸ್ವಭಾವ ರಾಶಿಗಳಿಗೆ ... 90°, 180°, 270°

ಹದಿಮೂರನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ದೃಷ್ಟಿಗಳನ್ನು ಪಟ್ಟಿಮಾಡಿ.**

ಸೂರ್ಯ ಕುಂಭದಲ್ಲಿದ್ದಾನೆ, ಅದು ಸ್ಥಿರ ರಾಶಿ, ಆದಕಾರಣ ಮೇಷವನ್ನೂ (ಅಲ್ಲಿರುವ ರಾಹು ಚಂದ್ರರನ್ನೂ), ತುಲವನ್ನೂ (ಅಲ್ಲಿರುವ ಕುಜ

ಕೇತುಗಳನ್ನೂ) ವೀಕ್ಷಿಸುತ್ತದೆ. ಇದೇ ರೀತಿಯಲ್ಲಿ ಮಾದರಿ ಜಾತಕದಲ್ಲಿ ಈ ದೃಷ್ಟಿಗಳನ್ನು ಪಟ್ಟಿಮಾಡಬಹುದು.

| ವೀಕ್ಷಿಸುವ ಗ್ರಹ | ವೀಕ್ಷಿತ ಗ್ರಹ | ವೀಕ್ಷಿತ ರಾಶಿ |
|---|---|---|
| ಸೂರ್ಯ | ರಾಹು, ಚಂದ್ರ, ಕುಜ, ಕೇತು | ಮೇಷ, ಕಟಕ, ತುಲ |
| ಚಂದ್ರ | ಸೂರ್ಯ, ಬುಧ, ಗುರು | ಸಿಂಹ, ವೃಶ್ಚಿಕ ಕುಂಭ |
| ಕುಜ | ಸೂರ್ಯ, ಬುಧ, ಗುರು | ಲಗ್ನ, ಕುಂಭ, ವೃಷಭ, ಸಿಂಹ |
| ಬುಧ | ಸೂರ್ಯನಂತೆ | ಸೂರ್ಯನಂತೆ |
| ಗುರು | " | " |
| ಶುಕ್ರ | ಶನಿ | ಮೀನ, ಮಿಥುನ ಕನ್ಯಾ |
| ಶನಿ | ಶುಕ್ರ | ಕನ್ಯಾ, ಧನುಸ್, ಮೀನ |
| ರಾಹು | ಚಂದ್ರನಂತೆ | ಚಂದ್ರನಂತೆ |
| ಕೇತು | ಕುಜನಂತೆ | ಕುಜನಂತೆ |

## 43. ಅರ್ಗಳಗಳು

ತಮ್ಮ ತಮ್ಮ ಸ್ಥಾನಾಂತರಗಳ ಪ್ರಕಾರ, ಗ್ರಹಗಳೂ ರಾಶಿಗಳೂ ಪರಸ್ಪರ ವೀಕ್ಷಿಸುತ್ತವೆ. ಈ ದೃಷ್ಟಿ ಪ್ರಭಾವವು, ವೀಕ್ಷಿಸುವ ಅಧಿಪತಿಯ ಅಥವಾ ರಾಶಿಯ ಸ್ಥಾನದಿಂದ ಕೆಲವು ಸ್ಥಳಗಳಲ್ಲಿರುವ ಗ್ರಹಗಳ ನಿಮಿತ್ತ ಒಳ್ಳೆಯದಾಗಿಯೋ ಕೆಟ್ಟದಾಗಿಯೋ ಪರಿಣಮಿಸುತ್ತದೆ. ಈ ಪರಿಣಾಮಕಾರಿಗೆ ಅಥವಾ ಪ್ರಭಾವಕಾರಿಗೆ **ಅರ್ಗಳ** ಎಂದು ಹೆಸರು.

ವೀಕ್ಷಿಸುವ ಗ್ರಹದಿಂದ (ಕೇತು ವಿನಾಯಿಸಿ) ಚತುರ್ಥ, ದ್ವಿತೀಯ, ಏಕಾದಶ ಮತ್ತು ಪಂಚಮ ಸ್ಥಾನಗಳಲ್ಲಿರುವ ಗ್ರಹಗಳು ಅರ್ಗಳಗಳಾಗುತ್ತವೆ, ಅಥವಾ **ಅರ್ಗಳ**ವುಂಟುಮಾಡುತ್ತವೆ. ಕೇತುವಿನಿಂದ ನವಮಸ್ಥಾನದಲ್ಲಿರುವ ಗ್ರಹಗಳು **ಅರ್ಗಳ**ಗಳಾಗುತ್ತವೆ.

### 44. ಶುಭಾರ್ಗಳ

ಮೇಲೆ ಹೇಳಿರುವ ಸ್ಥಾನಗಳಲ್ಲಿರುವ ನೈಸರ್ಗಿಕ ಶುಭಗ್ರಹಗಳು ಶುಭಾರ್ಗಳಗಳಾಗುತ್ತವೆ, ಅಥವಾ ವೃದ್ಧಿ ಕಾರಿಗಳಾಗುತ್ತವೆ.

### 45. ಪಾಪಾರ್ಗಳ

ಮೇಲಿನ 44ನೆಯ ಅಂಕದಲ್ಲಿ ಹೇಳಿರುವಂಥ ಸ್ಥಾನಗಳಲ್ಲಿರುವ ನೈಸರ್ಗಿಕ ಪಾಪಗ್ರಹಗಳು ಪಾಪಾರ್ಗಳಗಳಾಗುತ್ತವೆ, ಅಥವಾ ತೊಡಕುಂಟು ಮಾಡುತ್ತವೆ.

ತೃತೀಯ ಸ್ಥಾನದಲ್ಲಿರುವ ನೈಸರ್ಗಿಕ ಪಾಪಗ್ರಹಗಳು ಅರ್ಗಳವಾಗುತ್ತವೆ. ಈ ಅಂಶವನ್ನು ಕುರಿತ ಸೂತ್ರದ ಬಗ್ಗೆ ವ್ಯಾಖ್ಯಾನಕಾರರು ಕೊಟ್ಟಿರುವ ವಿವರಣೆ ಸ್ಪಷ್ಟವೂ ಆಗಿಲ್ಲ, ಅಥವಾ ಒಪ್ಪಿಗೆಯಾಗುವಂತೆಯೂ ಇಲ್ಲ. ಸರ್ವಾಭಿಪ್ರಾಯವೇನೆಂದರೆ ತೃತೀಯ ಸ್ಥಾನದಲ್ಲಿ ಹಲವು ಪಾಪಗ್ರಹಗಳು ಇದ್ದರೆ ಮಾತ್ರ ಅರ್ಗಳವುಂಟಾಗುತ್ತದೆ. ಒಂದೆರಡು ಪಾಪಗ್ರಹಗಳಿದ್ದರೆ ಅಲ್ಲ.

### 46. ಅರ್ಗಳಗಳಿಗೆ ಪ್ರತಿರೋಧಕ

ವೀಕ್ಷಿಸುವ ಗ್ರಹದಿಂದ ಅಥವಾ ಮನೆಯಿಂದ ಚತುರ್ಥ, ದ್ವಿತೀಯ, ಏಕಾದಶ, ಪಂಚಮಗಳಲ್ಲಿ ಗ್ರಹಗಳಿದ್ದರೆ ಅರ್ಗಳವುಂಟಾಗುತ್ತದಷ್ಟೆ ; ಅದೇ ವೇಳೆಗೆ ವೀಕ್ಷಿಸುವ ಗ್ರಹದಿಂದ ದಶಮ, ದ್ವಾದಶ, ತೃತೀಯ ಅಥವಾ ನವಮಗಳಲ್ಲಿ ಗ್ರಹಗಳಿದ್ದರೆ ಅರ್ಗಳಕ್ಕೆ ಪ್ರತಿರೋಧಕವುಂಟಾಗುತ್ತದೆ. ಕೇತುವಿನಿಂದ ನವಮದಲ್ಲಿ ಗ್ರಹವಿದ್ದರೆ ಉಂಟಾಗುವ ಅರ್ಗಳವು, ಪಂಚಮದಲ್ಲಿ ಗ್ರಹವಿದ್ದರೆ, ಅದರಿಂದ ಪರಿಹಾರವಾಗುತ್ತದೆ.

ಈ ಅಂಶವನ್ನು ಇನ್ನಷ್ಟು ಸ್ಪಷ್ಟೀಕರಿಸುತ್ತ ಹೀಗೆ ಹೇಳಬಹುದು : ಚತುರ್ಥದಲ್ಲಿರುವ ಗ್ರಹದಿಂದುಂಟಾದ ಅರ್ಗಳವು ದಶಮದಲ್ಲಿರುವ ಗ್ರಹದಿಂದ ನಿವಾರಣೆಯಾಗುತ್ತದೆ. ದ್ವಿತೀಯದಲ್ಲಿರುವ ಗ್ರಹದಿಂದುಂಟಾದ ಅರ್ಗಳವು ದ್ವಾದಶದಲ್ಲಿರುವ ಗ್ರಹದಿಂದ ನಿವಾರಣೆಯಾಗುತ್ತದೆ. ಏಕಾದಶದಲ್ಲಿರುವ ಗ್ರಹದಿಂದ ಉಂಟಾಗುವ ಅರ್ಗಳವು ತೃತೀಯದಲ್ಲಿರುವ ಗ್ರಹದಿಂದಲೂ ಪಂಚಮದ ಗ್ರಹದ ಅರ್ಗಳವು ನವಮದ ಗ್ರಹದಿಂದಲೂ ನಿವಾರಣೆಯಾಗುತ್ತವೆ. ಅಂದರೆ ಅರ್ಗಳ ಸ್ಥಾನಗಳಾದ 4, 2, 11 ಮತ್ತು 5ಕ್ಕೆ ಕ್ರಮವಾಗಿ

ನಿವಾರಕ ಸ್ಥಾನಗಳು 10, 12, 3 ಮತ್ತು 9. ಆದರೆ ತೃತೀಯದಲ್ಲಿರುವ ಗ್ರಹದಿಂದುಂಟಾಗುವ ಅರ್ಗಳಕ್ಕೆ ನಿವಾರಣೆಯಿಲ್ಲ ಎಂಬುದು ಇದರಿಂದ ಸ್ಪಷ್ಟ ವಾಗುತ್ತದೆ. ಇದು ಸರ್ವಥಾ ಪಾಪಾರ್ಗಳ. ಹಲವು ಪಾಪಗ್ರಹಗಳಿದ್ದಾಗ ಮಾತ್ರ ಇದು ಸಂಭವಿಸುತ್ತದೆ. ಕೆಳಗಿನ ಪಟ್ಟಿಯು ಅರ್ಗಳ ಪ್ರಕರಣವನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ.

| ಅರ್ಗಳ ಸ್ಥಾನಗಳು | ನಿವಾರಕ ಸ್ಥಾನಗಳು | ಅರ್ಗಳದ ಸ್ವಭಾವ |
|---|---|---|
| 4 | 10 | ಶುಭ |
| 2 | 12 | ಅಥವಾ |
| 11 | 3 | ಪಾಪ |
| 3 | — | ಪಾಪ |
| 5 | 9 | ಶುಭ |
| | | ಅಥವಾ |
| 6 (ಕೇತು) | 5 | ಪಾಪ |

ಅರ್ಗಳವನ್ನುಂಟುಮಾಡುವ ಗ್ರಹಕ್ಕಿಂತ ಅರ್ಗಳವನ್ನು ನಿವಾರಿಸುವ ಗ್ರಹವು ದುರ್ಬಲವಾಗಿದ್ದರೆ ಅಥವಾ ಕಡಿಮೆ ಅಕ್ಷಾಂಶ ಪಡೆದಿದ್ದರೆ, ಅರ್ಗಳದ ನಿವಾರಣೆ ಆಗುವುದಿಲ್ಲ.

## 47. ಅರ್ಗಳಗಳ ಮಹತ್ವ

ಶುಭಾರ್ಗಳಗಳುಂಟಾಗುವ ರಾಶಿಗಳ ದಶಾಕಾಲದಲ್ಲಿ (ಅಂಕ) 128 ನೋಡಿ), ಒಳ್ಳೆ ಫಲವುಂಟಾಗುತ್ತದೆ. ಪಾಪಾರ್ಗಳವನ್ನು ಹೊಂದಿರುವ ರಾಶಿಗಳ ದಶಾಕಾಲದಲ್ಲಿ ಕೆಟ್ಟ ಫಲ ಉಂಟಾಗುತ್ತದೆ. ಶುಭಾರ್ಗಳಗಳು ಪದಲಗ್ನದಲ್ಲಿ, ಲಗ್ನದಲ್ಲಿ, ಅಥವಾ ಸಪ್ತಮದಲ್ಲಿ ಸಂಭವಿಸಿದರೆ ಮತ್ತು ಅದಕ್ಕೆ ನಿವಾರಣೆಯಿಲ್ಲವಾದರೆ, ಅಂಥ ವ್ಯಕ್ತಿ ತುಂಬ ಅದೃಷ್ಟಶಾಲಿ ಮತ್ತು ಶ್ರೀಮಂತ ಆಗುತ್ತಾನೆ.

## 48· ಅರ್ಗಳ ಚಕ್ರ

ಮೇಲಿನ 44ನೆಯ ಅಂಕದಲ್ಲಿ ಹೇಳಿರುವಂತೆ ಆಯಾ ರಾಶಿಗಳಿಗೆ ಅರ್ಗಳ ವುಂಟಾಗುವುದನ್ನು ಗಮನಕ್ಕೆ ತೆಗೆದುಕೊಂಡು ಅರ್ಗಳ ಚಕ್ರವನ್ನು ಹಾಕ ಬಹುದು. ಹೇಗೆಂದರೆ, ಮೇಷದಿಂದ ಚತುರ್ಥದಲ್ಲಿ ಗ್ರಹವಿದ್ದರೆ ಅರ್ಗಳ ವುಂಟಾಗುವುದಷ್ಟೆ. ಅರ್ಗಳ ಚಕ್ರದಲ್ಲಿ ಮೇಷದ ಅರ್ಗಳವನ್ನು ಗುರುತಿಸಿ.

ಹದಿನಾಲ್ಕನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಅರ್ಗಳಗಳನ್ನೂ ಅವುಗಳಿಗೆ ಪ್ರತಿರೋಧಗಳನ್ನೂ ಕಂಡುಹಿಡಿಯಿರಿ.**

ಮಾದರಿ ಜಾತಕದಲ್ಲಿ ಸೂರ್ಯನಿಂದ ಚತುರ್ಥ, ದ್ವಿತೀಯ ಸ್ಥಾನಗಳು ಖಾಲಿಯಾಗಿವೆ. ತೃತೀಯದಲ್ಲಿ ಜಾಸ್ತಿ ಪಾಪಗ್ರಹಗಳು ಇಲ್ಲ. ಪಂಚಮದಲ್ಲಿ ಶುಕ್ರನಿದ್ದು ಶುಭಾರ್ಗಳವನ್ನುಂಟುಮಾಡುತ್ತಾನೆ. ಸೂರ್ಯನಿಂದ ಪಂಚಮ ದಲ್ಲಿ ಶನಿಯಿರುವ ಕಾರಣ ಉಂಟಾದ ಪಾಪಾರ್ಗಳವು ನವಮದಲ್ಲಿ ಕುಜನಿರು ವುದರಿಂದ ನಿವಾರಣೆಯಾಗಿದೆ. ಏಕಾದಶದಲ್ಲಿ ಶುಕ್ರನಿರುವುದರಿಂದ ಉಂಟಾದ ಶುಭಾರ್ಗಳವು ಚಂದ್ರ ಕೇತುಗಳು ತೃತೀಯದಲ್ಲಿರುವ ಕಾರಣ ನಿವಾರಣೆ ಯಾಗಿದೆ. ಆದರೆ ಅರ್ಗಳಕಾರಕ ಶನಿಯು (3° 20′ ಮತ್ತು ಶುಕ್ರನು (20° 33′) ಅರ್ಗಳ ನಿವಾರಕರಾದ ಕುಜ (0° 53′) ಮತ್ತು ಚಂದ್ರ

| | | | |
|---|---|---|---|
| ಚಂದ್ರ (ರವಿ ಬುಧ ಗುರು) ರಾಹು (ಕುಜ, ಬುಧ ಗುರು) ಶನಿ (ಶುಕ್ರ) | ರವಿ (ಶನಿ) ಬುಧ (ಶನಿ) ಗುರು (ಶನಿ) | ಶನಿ (ಚಂದ್ರ ರಾಹು) | ಕುಜ (ರವಿ, ಬುಧ ಗುರು) ಕೇತು (ರವಿ, ಬುಧ, ಗುರು) ಚಂದ್ರ ರಾಹು |
| ಶನಿ (ಕುಜ ಕೇತು) ಶುಕ್ರ (ಚಂದ್ರ (ರಾಹು) | ಅರ್ಗಳ ಚಕ್ರ | | ಕುಜ (ಚಂದ್ರ, ರಾಹು) ಕೇತು (ಚಂದ್ರ, ರಾಹು) |
| ರವಿ (ಶುಕ್ರ ಬುಧ(ಶುಕ್ರ)ಗುರು (ಶುಕ್ರ) ಚಂದ್ರ (ಕುಜ ಕೇತು) ರಾಹು (ಕುಜ ಕೇತು) | | | ಶುಕ್ರ (ಚಂದ್ರ ರಾಹು ಶನಿ (ಕುಜ ಕೇತು |
| ಚಂದ್ರ, ರಾಹು ಕುಜ (ರವಿ ಬುಧ ಗುರು) ಕೇತು (ರವಿ ಬುಧ, ಗುರು) | ಶುಕ್ರ (ಕುಜ, ಕೇತು) ರವಿ ಬುಧ ಗುರು | ರವಿ (ಶನಿ) ಬುಧ (ಶನಿ) ಗುರು (ಶನಿ) | ಕುಜ ಕೇತು ಶುಕ್ರ (ಶನಿ) |

(18° 29') ರಿಗಿಂತ ಹೆಚ್ಚು ಅಕ್ಷಾಂಶ ಪಡೆದಿರುವುದರಿಂದ, ಅರ್ಗಳ ನಿವಾರಣೆ ಆಗಿರುವುದಿಲ್ಲ ಎಂದು ನಾವು ಭಾವಿಸಬಹುದು.

## 49. ಮಾದರಿ ಜಾತಕದಲ್ಲಿ ಅರ್ಗಳ ಚಕ್ರ

ಕಂಸದಲ್ಲಿಲ್ಲದ ಗ್ರಹಗಳು ಅರ್ಗಳಕಾರಕಗಳು, ಕಂಸದಲ್ಲಿರುವುವು ಅರ್ಗಳ ನಿವಾರಕಗಳು. ಅಡಿಗೀರು ಇರುವ ಗ್ರಹಗಳು ತಮ್ಮ ನಿವಾರಕ ಶಕ್ತಿಯನ್ನು ಪ್ರಯೋಗಿಸಲು ಸಮರ್ಥವಾದವು. ಚಕ್ರದಲ್ಲಿ ಮೇಷವನ್ನು ತೆಗೆದುಕೊಳ್ಳಿ. ರವಿ, ಬುಧ, ಗುರುಗಳು ಉಂಟುಮಾಡಿರುವ ಅರ್ಗಳಗಳನ್ನು ಶನಿಯು ನಿವಾರಿಸಿದರೂ ಪೂರ್ಣ ಪ್ರತಿರೋಧವನ್ನು ಮಾಡಿಲ್ಲ. ವೃಷಭವನ್ನು ತೆಗೆದು ಕೊಳ್ಳಿ, ಶನಿಯು ಅರ್ಗಳವುಂಟುಮಾಡುತ್ತಾನೆ. ಆದರೆ ಚಂದ್ರ ಅದನ್ನು ನಿವಾರಿಸುತ್ತಾನೆ. ಚಂದ್ರನು ಶನಿಗಿಂತ ಪ್ರಬಲನಾದ ಕಾರಣ (ಶನಿಯ ಅಕ್ಷಾಂಶ ಕಡಿಮೆ), ಅರ್ಗಳವು ಪೂರ್ತ ನಿವಾರಣೆಯಾಗಿದೆ. ಮಿಥುನವನ್ನು ತೆಗೆದು ಕೊಳ್ಳಿ, ಅರ್ಗಳವನ್ನು (1) ರಾಹು ಮತ್ತು ಚಂದ್ರ, (2) ಕುಜ ಮತ್ತು ಕೇತು ಉಂಟು ಮಾಡುತ್ತಾರೆ. ಚಂದ್ರ ರಾಹುಗಳಿಂದೊದಗಿದ ಅರ್ಗಳವು ನಿವಾರಣೆಯಾಗಿಲ್ಲ. ಆದರೆ ಕುಜ ಕೇತುಗಳಿಂದ (ಮಿಥುನದಿಂದ ಇವರಲ್ಲಿ ಅವು ಇರುವ ಕಾರಣ), ರವಿ, ಬುಧ, ಗುರುಗಳಿಂದ (ಅವು ಮಿಥುನದಿಂದ ಒಂಬತ್ತ ರಲ್ಲಿರುವ ಕಾರಣ) ನಿವಾರಣೆಯಾಗಿದೆ. ಆದರೆ ವಾಸ್ತವವಾಗಿ ಅರ್ಗಳವು ಪೂರ್ತಿ ಹೋಗಿಲ್ಲ. ಏಕೆಂದರೆ ಅರ್ಗಳಕಾರಕ ಕೇತು ಗುರುವಿಗಿಂತ ಪ್ರಬಲ, ಮತ್ತು ಅರ್ಗಳ ನಿವಾರಕ ಬುಧ ಕುಜನಿಗಿಂತ ಪ್ರಬಲ.

ಮಾದರಿ ಜಾತಕದಲ್ಲಿ ಗ್ರಹಾರ್ಗಳಗಳು :

| ಗ್ರಹ | ಅರ್ಗಳಕಾರಕ | ಅರ್ಗಳ ನಿವಾರಕ |
|---|---|---|
| ಸೂರ್ಯ | ಶನಿ, ಶುಕ್ರ | ಕುಜ, ಕೇತು, ಚಂದ್ರ, ರಾಹು |
| ಚಂದ್ರ | ಸೂರ್ಯ, **ಬುಧ ಗುರು,** | ಶನಿ |
| ಕುಜ | ಸೂರ್ಯ, **ಬುಧ ಗುರು,** | ಶನಿ |
| ಬುಧ | ಸೂರ್ಯನಂತೆ | ಸೂರ್ಯನಂತೆ |
| ಗುರು | " | " |
| ಶುಕ್ರ | ಚಂದ್ರ, ರಾಹು, ಕುಜ | ರವಿ, ಬುಧ ಗುರು |
| ಶನಿ | " | " |

| ಗ್ರಹ | ಅರ್ಗಳಕಾರಕ | ಅರ್ಗಳನಿವಾರಕ |
|---|---|---|
| ರಾಹು | ಚಂದ್ರನಂತೆ | ಚಂದ್ರನಂತೆ |
| ಕೇತು | ಶನಿ | ರವಿ, ಬುಧ, ಗುರು |

ಅಡಿಗೆರೆಯುಳ್ಳ ಗ್ರಹಗಳು ಅರ್ಗಳ ಉಂಟುಮಾಡಿವೆ. ಆದರೆ ನಿವಾರಣೆ ಯುಂಟಾಗಿಲ್ಲ. ಕಾರಣ ನಿವಾರಕ ಗ್ರಹಗಳ ದೌರ್ಬಲ್ಯ ಅಥವಾ ನಿವಾರಕ ಗ್ರಹಗಳು ಸರಿಯಾದ ಸ್ಥಾನದಲ್ಲಿಲ್ಲದಿರುವುದು. ಕುಜನನ್ನು ತೆಗೆದುಕೊಳ್ಳಿ. ರವಿ, ಬುಧ, ಗುರು ಪಂಚಮ ಸ್ಥಾನದಲ್ಲಿರುವುದರಿಂದ ಅರ್ಗಳ ಉಂಟಾಗಿದೆ. ನವಮದಲ್ಲಿ ಒಂದು ಗ್ರಹವಿದ್ದರೂ ಅದು ದುರ್ಬಲವಾಗಿ ಪೃಥಕ್ಕಾಗಿರುವ ಕಾರಣ ಅರ್ಗಳವನ್ನು ಪೂರ್ತಿ ನಿವಾರಿಸಲಾರದು.

ಸೂರ್ಯ, ಬುಧ, ಗುರು ಸಪ್ತಮದಲ್ಲಿರುವುದರಿಂದ ಒದಗಿರುವ ಅರ್ಗಳ ವನ್ನು ಗಮನಿಸಿ. ಜಾತಕನು ಶ್ರೀಮಂತನೂ, ಅದೃಷ್ಟವಂತನೂ, ಪ್ರಭಾವ ಶಾಲಿಯೂ ಆಗಿದ್ದನು.

ನಾಲ್ಕನೆಯ ಅಧ್ಯಾಯ

# ಗ್ರಹ ಮತ್ತು ರಾಶಿ ಬಲಗಳು

## 50. ಬಲದ ಮೂಲಗಳು

ಪರಾಶರಿ ಪದ್ಧತಿಯಲ್ಲಿ, ಗ್ರಹದ ಬಲವನ್ನೂ ಅಂಕಿಗಳಲ್ಲಿ ಅಳೆಯ ಬಹುದು. ಬಲ ಆರು ಬಗೆಯದು. ಇವನ್ನು ಸಾಕಷ್ಟು ವಿಸ್ತಾರವಾಗಿ ನನ್ನ **ಗ್ರಹ ಮತ್ತು ಭಾವಬಲ** ಎಂಬ ಆಂಗ್ಲ ಭಾಷಾ ಪುಸ್ತಕದಲ್ಲಿ ವಿವರಿಸಿದೆ. ಆದಕಾರಣ ಈ ಪುಸ್ತಕದಲ್ಲಿ ಅದರ ಪ್ರಸ್ತಾಪ ಮಾಡುವುದಿಲ್ಲ. ಷಡ್ಬಲಗಳ ನಿಷ್ಕರ್ಷೆಗೆ ಹೆಚ್ಚಾಗಿ ಲೆಕ್ಕಾಚಾರ ಮಾಡಬೇಕು. ಆದರೆ ಜೈಮಿನಿಯು ಈ ಲೆಕ್ಕಾಚಾರದ ಕಲಾಪವನ್ನು ತ್ಯಜಿಸಿ, ಗ್ರಹಬಲ, ಭಾವಬಲಗಳನ್ನು ತಿಳಿಯಲು ಸುಲಭೋಪಾಯವನ್ನು ಅವಲಂಬಿಸುತ್ತಾನೆ. ಆಯುರ್ದಾಯವನ್ನು ಕಂಡು ಹಿಡಿಯಲು ಗ್ರಹಬಲ ಭಾವಬಲಗಳು ಮುಖ್ಯ. ಜೈಮಿನಿಯು ರಾಶಿಗಳ ಬಲಕ್ಕೆ ಹೆಚ್ಚು ಪ್ರಾಮುಖ್ಯ ಕೊಡುತ್ತಾನೆಂಬುದು ಗಮನಾರ್ಹ. ರಾಶಿಬಲವು ಅದರಲ್ಲಿರುವ ಗ್ರಹಸಂಖ್ಯೆಯನ್ನು ಅವಲಂಬಿಸುತ್ತದೆ. ಜೈಮಿನಿಯು ರಾಶಿಗೂ ಭಾವಕ್ಕೂ ವ್ಯತ್ಯಾಸವೆನಿಸುವುದಿಲ್ಲವಾದಕಾರಣ, ಜೈಮಿನಿ ತತ್ವಗಳ ವಿಚಾರ ಮಾಡುವಾಗ ಇವೆರಡೂ ಸಮಾನಾರ್ಥಕವಾದ ಪದಗಳೆಂದು ಭಾವಿಸ ಬೇಕು.

## 51. ರಾಶಿಬಲದ ಮೂಲಗಳು

ಜೈಮಿನಿ ಸೂತ್ರಗಳ ಎರಡನೆಯ ಅಧ್ಯಾಯ ಮೂರನೆಯ ಪಾದದಲ್ಲಿ ಗ್ರಹಗಳ ಮತ್ತು ರಾಶಿಗಳ ಬಲಗಳನ್ನು ಕಂಡುಹಿಡಿಯುವುದಕ್ಕೆ ಸುಳಿವು ಇದೆ. ಸಂಬಂಧಪಟ್ಟ ಸೂತ್ರಗಳನ್ನು ಜಾಗರೂಕತೆಯಿಂದ ಅಧ್ಯಯನ ಮಾಡಿದರೆ, ರಾಶಿಬಲಗಳನ್ನು ಆರು ವಿಭಾಗಗಳಾಗಿ ವರ್ಗೀಕರಿಸಬಹುದು : (1) ಆತ್ಮ ಕಾರಕನಿಂದ ಸಂದ ಬಲ, (2) ಸಂಬಂಧ ಬಲ, (3) ಸ್ಥಾನ ಅಥವಾ ದೃಷ್ಟಿ ಬಲ, (4) ಅಧಿಪತಿ ಬಲ, (5) ಬೆಸ ರಾಶಿಗಳಿಂದ ಸಂದ ಬಲ ಮತ್ತು

(6) ಆತ್ಮಕಾರಕನ ಸನ್ನಿವೇಶ ಬಲ. ಈ ಪ್ರತಿಯೊಂದನ್ನೂ ವಿವರಿಸೋಣ. ನನ್ನದೇ ಆದ ಒಂದು ವಿಧಾನವನ್ನು 62ನೆಯ ಅಂಕದಲ್ಲಿ ಕಾಣಬಹುದು.

## 52. ಆತ್ಮಕಾರಕ ಬಲ

ಜಾತಕದಲ್ಲಿ ಆತ್ಮಕಾರಕನು ಅತ್ಯಂತ ಮುಖ್ಯವಾದ ಗ್ರಹವಾಗಿರುವ ಕಾರಣ, ಆತ್ಮಕಾರಕ ಇರುವ ರಾಶಿಯು ಅತ್ಯಂತ ಪ್ರಬಲವಾಗುತ್ತವೆ.

## 53. ಸಂಬಂಧ ಬಲ

ಯಾವುದೇ ರಾಶಿಯಲ್ಲಿ ಗ್ರಹಗಳು ಇರುವುದನ್ನು ಅಥವಾ ಇಲ್ಲದಿರುವು ದನ್ನು ಈ ಬಲವು ಆಧರಿಸಿದೆ. ರಾಶಿಬಲವನ್ನು ನಿಷ್ಕರ್ಷಿಸುವುದು ಹೀಗೆ :

(1) ಗ್ರಹವಿರುವ ರಾಶಿಯು ಗ್ರಹವಿಲ್ಲದ ರಾಶಿಗಿಂತ ಪ್ರಬಲ.

(2) ಎರಡು ರಾಶಿಗಳಲ್ಲಿ ಗ್ರಹಗಳಿದ್ದಾಗ, ಹೆಚ್ಚು ಗ್ರಹಗಳಿರುವ ರಾಶಿಯು ಕಡಿಮೆ ಗ್ರಹಗಳಿರುವ ರಾಶಿಗಿಂತ ಪ್ರಬಲವಾಗುತ್ತದೆ.

(3) ರಾಶಿಗಳಲ್ಲಿ ಸಮಾನ ಸಂಖ್ಯೆಯ ಗ್ರಹಗಳಿದ್ದಾಗ, ಆಯಾ ಗ್ರಹ ಗಳ ಬಲಾಬಲಗಳನ್ನು ಎಣಿಸಬೇಕು—ಗ್ರಹಗಳು ಉಚ್ಚವಾಗಿವೆಯೆ, ಮೂಲ ತ್ರಿಕೋಣದಲ್ಲಿವೆಯೆ, ಸ್ವಕ್ಷೇತ್ರ ಮಿತ್ರಕ್ಷೇತ್ರಗಳಲ್ಲಿವೆಯೆ, ಶತ್ರುಕ್ಷೇತ್ರ ಸಮ ಕ್ಷೇತ್ರಗಳಲ್ಲಿವೆಯೆ ಎಂದು ಪರೀಕ್ಷಿಸಬೇಕು. ಉಚ್ಚಗ್ರಹವು ಅತ್ಯಂತ ಪ್ರಬಲ, ಅದಕ್ಕಿಂತ ಕಡಿಮೆ ಮೂಲತ್ರಿಕೋಣಸ್ಥ ಗ್ರಹ, ಸ್ವಕ್ಷೇತ್ರನು ಇನ್ನೂ ಕಡಿಮೆ ಬಲವುಳ್ಳವನು, ಮಿತ್ರಕ್ಷೇತ್ರದಲ್ಲಿರುವ ಗ್ರಹ ಅದಕ್ಕಿಂತ ಕಡಿಮೆ ಬಲವುಳ್ಳ ವನು. ಸಮಕ್ಷೇತ್ರ, ನೀಚಕ್ಷೇತ್ರ, ಶತ್ರುಕ್ಷೇತ್ರಗಳಲ್ಲಿರುವ ಗ್ರಹಗಳಿಗೆ ಕ್ರಮ ವಾಗಿ ಬಲ ಕುಗ್ಗುತ್ತ ಬರುತ್ತದೆ. ಶತ್ರುಕ್ಷೇತ್ರದ ಗ್ರಹವೇ ಅತ್ಯಂತ ಕಡಿಮೆ ಬಲದ್ದು. ಈ ರೀತಿ ಎರಡು ರಾಶಿಗಳಲ್ಲಿ ಎರಡೆರಡು ಗ್ರಹಗಳಿದ್ದಾಗ, ಅವರಲ್ಲಿ ಒಂದು ನೀಚವೂ ಇನ್ನೊಂದು ರಾಶಿಯಲ್ಲಿ ಒಂದು ಉಚ್ಚವೂ ಆಗಿದ್ದರೆ, ಉಚ್ಚ ಗ್ರಹವುಳ್ಳ ರಾಶಿಯೇ ಹೆಚ್ಚು ಬಲವುಳ್ಳದ್ದು.

(4) ಎರಡು ರಾಶಿಗಳ ಬಲವು (1), (2) ಮತ್ತು (3)ರ ಪ್ರಕಾರ ಏಕಸಮವಾಗಿದ್ದಾಗ, ರಾಶಿಯು ಚರ ಸ್ಥಿರ ದ್ವಿಸ್ವಭಾವಗಳನ್ನು ಗಮನಿಸ ಬೇಕು. ಚರರಾಶಿಗಿಂತ ಸ್ಥಿರರಾಶಿ ಪ್ರಬಲ, ಸ್ಥಿರರಾಶಿಗಿಂತ ದ್ವಿಸ್ವಭಾವರಾಶಿ ಪ್ರಬಲ.

## 54. ಸ್ಥಾನ ಅಥವಾ ದೃಷ್ಟಿಯ ಬಲ

ಒಂದು ರಾಶಿಯು ಗುರು, ಬುಧ ಅಥವಾ ರಾಶ್ಯಾಧಿಪತಿಯ ಯುತಿಯಿಂದಲೋ ದೃಷ್ಟಿಯಿಂದಲೋ ಬಲವೃದ್ಧಿಯನ್ನು ಪಡೆಯುತ್ತದೆ.

## 55. ಅಧಿಪತ್ಯ ಬಲ

ಎರಡು ರಾಶಿಗಳಲ್ಲಿ 59 ಮತ್ತು 60ನೆಯ ಅಂಕಗಳ ಪ್ರಕಾರ, ಯಾವ ರಾಶಿಯ ಅಧಿಪತಿಗೆ ಹೆಚ್ಚು ಬಲವಿರುತ್ತದೆಯೋ ಅದೇ ಪ್ರಬಲ ರಾಶಿ ಯಾಗುತ್ತದೆ.

## 56. ಬೆಸರಾಶಿಗಳ ಬಲ

ಎರಡು ಬೆಸ ರಾಶಿಗಳ ಬಲವನ್ನು ಎಣಿಸಬೇಕಾದಾಗ, ಯಾವ ರಾಶಿಯ ಇಕ್ಕೆಲಗಳಲ್ಲೂ ಗ್ರಹಗಳಿರುತ್ತವೆಯೋ ಅದೇ ಹೆಚ್ಚು ಬಲವುಳ್ಳ ರಾಶಿ.

## 57. ಆತ್ಮಕಾರಕನ ಸನ್ನಿವೇಶ ಬಲ

ಆತ್ಮಕಾರಕನಿಂದ ಯಾವ ರಾಶಿಗಳ ಅಧಿಪತಿಗಳು ಕೇಂದ್ರ, ಫಣಪರ, ಆಪೋಕ್ಲಿಮಗಳಲ್ಲಿರುತ್ತವೋ ಅವಕ್ಕೆ ಕ್ರಮವಾಗಿ ಪೂರ್ತಿಬಲ, ಅರ್ಧಬಲ ಮತ್ತು ದುರ್ಬಲ ಉಂಟಾಗುತ್ತದೆ.

## 58. ಗ್ರಹಬಲದ ಮೂಲಗಳು

ಗ್ರಹಬಲಕ್ಕೆ ಎರಡು ಮೂಲಗಳಿವೆ. (1) ಅಂಶಬಲ ಮತ್ತು (2) ಮೂಲತ್ರಿಕೋಣ ಬಲ.

## 59. ಅಂಶಬಲ

ಅಂಶ ಅಂದರೆ ಡಿಗ್ರಿ. ಯಾವ ಗ್ರಹದ ಅಂಶವು (ಆಯಾ ರಾಶಿಯ ಪ್ರಾರಂಭದಿಂದ) ಮತ್ತೊಂದು ಗ್ರಹದ ಅಂಶಕ್ಕಿಂತ ಹೆಚ್ಚಾಗಿರುತ್ತದೆಯೋ ಅದೇ ಹೆಚ್ಚು ಪ್ರಬಲವಾಗಿರುತ್ತದೆ. ಸೂರ್ಯನ ಅಂಶವು ಮೇಷ 25° ಎಂದೂ ಕುಜನ ಅಂಶವು ಕರ್ಕಾಟಕ 18° ಎಂದೂ ಇಟ್ಟುಕೊಳ್ಳಿ. ಆಗ ಸೂರ್ಯನು ಕುಜನಿಗಿಂತ ಪ್ರಬಲ.

## 60. ಮೂಲತ್ರಿಕೋಣ ಬಲ

ಇದು ಗ್ರಹದ ಶತ್ರುಕ್ಷೇತ್ರ ನೀಚ, ಸಮ, ಮಿತ್ರ ಸ್ವಕ್ಷೇತ್ರಗಳಿಗೂ ಮೂಲತ್ರಿಕೋಣ ಅಥವಾ ಉಚ್ಚರಾಶಿಗಳಿಗೂ ಸಂಬಂಧಪಟ್ಟದ್ದು.

ಉಚ್ಚಗ್ರಹವೇ ಅತ್ಯಂತ ಪ್ರಬಲ, ನೀಚಗ್ರಹವೇ ಅತ್ಯಂತ ದುರ್ಬಲ. ಬಲದ ಎಣಿಕೆಯು ಉಚ್ಚದಿಂದ ನೀಚವವರೆಗೆ ಇಳಿಮುಖವಾಗಿರುತ್ತದೆ, ಹೀಗೆ :

ಉಚ್ಚ, ಮೂಲತ್ರಿಕೋಣ, ಸ್ವರಾಶಿ, ಮಿತ್ರರಾಶಿ, ಸಮರಾಶಿ, ಶತ್ರುರಾಶಿ ಮತ್ತು ನೀಚರಾಶಿ.

ಗ್ರಹಗಳ ಬಲಾಬಲಗಳನ್ನು ನಿಷ್ಕರ್ಷಿಸುವ ನಿಯಮಗಳನ್ನು ಅವಲಂಬಿಸುವಾಗ, ಮೇಲೆ ಹೇಳಿರುವ ಕ್ರಮವನ್ನು ಅನುಸರಿಸಬೇಕು. ಜ್ಯೋತಿಷದಲ್ಲಿ ಸಾಮಾನ್ಯವಾಗಿ ಮಾಡುವಂತೆ, ಮೊದಲು ತತ್ವಗಳನ್ನು ಜೋಪಾನವಾಗಿ ಓದಿ, ಚೆನ್ನಾಗಿ ಅರ್ಥಮಾಡಿಕೊಂಡು, ಹಲವಾರು ಜಾತಕಗಳಿಗೆ ಅವನ್ನು ಅನ್ವಯಿಸಿದರೆ ಅನುಭವಜ್ಞಾನವುಂಟಾಗುತ್ತದೆ.

ಹದಿನೈದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ರಾಶಿಬಲಗಳನ್ನು ಕಂಡುಹಿಡಿಯಿರಿ.**

I ಮೇಷ ಮತ್ತು ತುಲಾ :

(1) ಎರಡು ರಾಶಿಗಳಲ್ಲೂ ಎರಡೆರಡು ಗ್ರಹಗಳಿವೆ. ಎರಡು ರಾಶಿಗಳೂ ಚರ.

(2) ಎರಡೂ ಗುರು ಬುಧರ ದೃಷ್ಟಿಗೆ ಒಳಗಾಗಿವೆ.

(3) ಮೇಷದಲ್ಲಿ ಚಂದ್ರನು ಸಮರಾಶಿಯಲ್ಲಿದ್ದಾನೆ. ಕುಜನೂ ತುಲಾದಲ್ಲಿ ಸಮರಾಶಿಯಲ್ಲಿದ್ದಾನೆ.

(4) ಮೇಷಾಧಿಪತಿ ಕುಜನೂ ತುಲಾಧಿಪತಿ ಶುಕ್ರನೂ ಆತ್ಮಕಾರಕನಿಂದ ಕ್ರಮವಾಗಿ ಆಪೋಕ್ಲಿಮ ಫಣಪರ ರಾಶಿಗಳಲ್ಲಿ ಇದ್ದಾರೆ. ತುಲಾ ಮೇಷಕ್ಕಿಂತ ಪ್ರಬಲ.

(5) ತುಲಾಧಿಪತಿ ಶುಕ್ರ ಮೇಷಾಧಿಪತಿ ಕುಜನಿಗಿಂತ ಪ್ರಬಲ. ಆದಕಾರಣ ತುಲಾ ಮೇಷಕ್ಕಿಂತ ಪ್ರಬಲ.

II ಮಿಥುನ ಮತ್ತು ಧನುಸ್ :

(1) ಎರಡು ರಾಶಿಗಳಲ್ಲೂ ಒಂದೊಂದು ಗ್ರಹವಿದೆ. ಎರಡೂ ದ್ವಿಸ್ವಭಾವ ರಾಶಿಗಳು.

(2) ಮಿಥುನವನ್ನು ಮಿತ್ರನಾದ ಶುಕ್ರನು ವೀಕ್ಷಿಸುತ್ತಾನೆ. ಧನುಸ್ಸನ್ನು ಸಮನಾದ ಶನಿ ವೀಕ್ಷಿಸುತ್ತಾನೆ.

(3) ಮಿಥುನದಲ್ಲಿ ಶನಿ ಮಿತ್ರರಾಶಿಯಲ್ಲಿದ್ದಾನೆ. ಶುಕ್ರ ಸಮರಾಶಿಯಲ್ಲಿದ್ದಾನೆ.

(4) ಮಿಥುನಾಧಿಪತಿ ಬುಧ ಆತ್ಮಕಾರಕನಿಂದ ಕೇಂದ್ರದಲ್ಲಿದ್ದಾನೆ. ಗುರುವೂ ಆತ್ಮಕಾರಕ.

(5) ಧನುಸ್ಸಿನ ಅಧಿಪತಿ ಮಿಥುನಾಧಿಪತಿಗಿಂತ ಪ್ರಬಲ. ಆದಕಾರಣ, ಮಿಥುನಕ್ಕಿಂತ ಧನುಸ್ ಪ್ರಬಲ.

III ಕುಂಭ :

ಈ ರಾಶಿಯಲ್ಲಿ ಆತ್ಮಕಾರಕನೇ ಇರುವುದಲ್ಲದೆ, ಅತ್ಯಂತ ಹೆಚ್ಚು ಸಂಖ್ಯೆಯ ಗ್ರಹಗಳಿವೆ. ಜತೆಗೆ ಸೂರ್ಯ ಬುಧರೂ ಇದ್ದಾರೆ. ಪರಿಣಾಮವಾಗಿ ಕುಂಭವೇ ಅತ್ಯಂತ ಪ್ರಬಲ ರಾಶಿ.

## 61. ರಾಶಿಬಲದ ಎಣಿಕೆ

ಮೇಲೆ ನಾನು ರಾಶಿಗಳ ಬಲ ಮೂಲಗಳನ್ನು ಕುರಿತು ಸಾಧ್ಯವಾದಷ್ಟು ಸ್ಪಷ್ಟವಾಗಿ ಹೇಳಿದ್ದೇನೆ. ಪರಾಶರ ಸೂಚಿತವಾದ ವಿಧಾನಕ್ಕೆ ಅನುಗುಣವಾದಂಥ ಒಂದು ವಿಧಾನವನ್ನು ಹವಣಿಸಿಕೊಳ್ಳದೇಹೋದರೆ ಯಾವುದು ಪ್ರಬಲ ರಾಶಿ ಯಾವುದು ದುರ್ಬಲ ರಾಶಿ ಎಂದು ಖಚಿತವಾಗಿ ಹೇಳಲು ಕಷ್ಟವಾದೀತು. ದಶಾ ಭವಿಷ್ಯ ವಿಧಾನವೆಲ್ಲವೂ ಜೈಮಿನಿ ಪ್ರಕಾರ ರಾಶಿಗಳನ್ನು ಮತ್ತು ಅವುಗಳ ಬಲಾಬಲಗಳನ್ನು ಅವಲಂಬಿಸುತ್ತದೆ. 52ರಿಂದ 61ರವರೆಗಣ ಅಂಕಗಳಲ್ಲಿ ಪ್ರತಿಪಾದಿಸಿರುವ ತತ್ತ್ವಗಳ ಆಧಾರದ ಮೇಲೆ ಮತ್ತು ಜೈಮಿನಿಯ ರಾಶಿಯಿಂದ ಕೊಂಚ ಆಗಲೀ, ಅಥವಾ ಸ್ಪಷ್ಟವಾಗಿ ಹೇಳುವುದಾದರೆ, ಸಂಬಂಧಪಟ್ಟಷ್ಟು ಪರಾಶರಿ ತತ್ತ್ವಗಳನ್ನು ಆಧರಿಸಿಕೊಂಡು, ವಿವಿಧ ರಾಶಿಗಳ ಬಲಾಬಲಗಳನ್ನು ಅಂಕಿಗಳನ್ನು ಎಣಿಸುವ ಒಂದು ವಿಧಾನವನ್ನು ಮುಂದೆ ಸೂಚಿಸುವಂತೆ ನಾನು ಅನುವುಗೊಳಿಸಿಕೊಂಡಿದ್ದೇನೆ. ವಾಚಕರು ಇಲ್ಲಿ ಕೊಡಲಿರುವ ವಿಧಾನವನ್ನು, ಬಲಾಬಲ ನಿಷ್ಕರ್ಷೆಯ ಸಮಸ್ಯೆಯನ್ನು ಪರಿಹಾರ ಮಾಡುವುದಕ್ಕಾಗಿ ನಾನು ಹವಣಿಸಿರುವ ಒಂದು ಉಪಾಯ ಎಂಬುದನ್ನು ಸ್ಪಷ್ಟವಾಗಿ ಮನಗಾಣತಕ್ಕದ್ದು. ಅದು ಅಪ್ರಮಾಣಿಕ ಎಂದೂ ಜೈಮಿನಿಯಿಂದ ಕೊಂಚ ದೂರ ಸರಿದರೂ ಅಂಥದ್ದು ಮಾನ್ಯವಲ್ಲ ಎಂದೂ ಭಾವಿಸುವವರು ಅದನ್ನು ಬಿಡಬಹುದು. ತನಗೆ ತಕ್ಕ ಬೆಲೆಯನ್ನು ಅದು ಕಂಡುಕೊಳ್ಳಲಿ ಎಂದು ಆ ವಿಧಾನವನ್ನು ಇಲ್ಲಿ ಮಂಡಿಸಿದ್ದೇನೆ.

ಅಂಕಗಳ 52 ರಿಂದ 61ರವರೆಗೆ ಕೊಟ್ಟಿರುವ ವಿವರಗಳಿಂದ ರಾಶಿಬಲವು ಈ ಅಂಶಗಳಿಂದ ಕೂಡಿದ್ದೆಂದು ಸ್ಪಷ್ಟವಾಗುತ್ತದೆ : (1) ಅಧಿಪತಿಯ ಬಲ ಮತ್ತು (2) ರಾಶಿಯು (ಅ) ಚರವೇ, ಸ್ಥಿರವೇ, ದ್ವಿಸ್ವಭಾವವೇ ಎಂಬುವನ್ನು ಅವಲಂಬಿಸಿದ ಬಲ ; ಅವನ್ನು ನಾನು ಚರಬಲ ಎನ್ನುತ್ತೇನೆ, (ಆ) ಗುರು, ಬುಧ ಅಥವಾ ರಾಶ್ಯಾಧಿಪತಿಯ ದೃಷ್ಟಿಯಿಂದ ಸಂದಾಯವಾದ ಬಲ–ದೃಕ್ ಬಲ, (ಇ) ರಾಶಿಯಲ್ಲಿ ಒಂದಕ್ಕಿಂತ ಹೆಚ್ಚು ಗ್ರಹಗಳಿರುವುದರಿಂದ ಬರುವ ಬಲ–ಸ್ಥಿರಬಲ. ಆದ್ದರಿಂದ ನಾವು ಒಂದು ರಾಶಿಯ ಮೊತ್ತದ ಬಲವು (1) ತನ್ನ ಸ್ವಂತ ಬಲ ಮತ್ತು (2) ಅಧಿಪತಿಯ ಬಲ ಇವುಗಳಿಂದ ಕೂಡಿದೆ ಎಂದು ಹೇಳಬಹುದು. ಈ ಎರಡನ್ನೂ ಪ್ರತ್ಯೇಕವಾಗಿ ತೆಗೆದುಕೊಳ್ಳೋಣ.

## 62. ಅಧಿಪತಿಯ ಬಲ

ಅಧಿಪತಿಯ ಬಲವು (1) ಉಚ್ಚರಾಶಿ, ಸ್ವರಾಶಿ ಮುಂತಾದ ಕಡೆಗಳಲ್ಲಿರುವುದರಿಂದ ಒದಗುವ ಬಲ—ನಾನು ಮೂಲತ್ರಿಕೋಣ ಬಲ ಎನ್ನುತ್ತೇನೆ, (2) ಅಂಶಬಲ ಮತ್ತು (3) ಆತ್ಮಕಾರಕನಿಂದ ಕೇಂದ್ರ, ಫಣಪರ ಅಪೋಕ್ಲಿಮಗಳಲ್ಲಿರುವುದರಿಂದ ಸಂದಾಯವಾಗುವ ಬಲ—ಕೇಂದ್ರಬಲ ಇವುಗಳಿಂದ ಕೂಡಿರುತ್ತದೆಂದು ಭಾವಿಸಬಹುದು.

## 63. ಮೂಲತ್ರಿಕೋಣ ಬಲ

ನನ್ನ **ಗ್ರಹ ಮತ್ತು ಭಾವಬಲ** ಎಂಬ ಆಂಗ್ಲ ಪುಸ್ತಕದಲ್ಲಿ ಚರ್ಚಿಸಿರುವ ಮೂಲತ್ರಿಕೋಣ ಬಲದೊಂದಿಗೆ ಇದನ್ನು ಬೆರಸಕೂಡದು. ಅಲ್ಲಿ ಮಿತ್ರ, ಶತ್ರು, ಸ್ವಕ್ಷೇತ್ರುಗಳೇ ಮುಂತಾದ ಸಪ್ತವರ್ಗಗಳಲ್ಲಿರುವ ಗ್ರಹದ ವಿಷಯವನ್ನು ಚರ್ಚಿಸಿದೆ.

ಇಲ್ಲಿ ರಾಶಿ ಕುಂಡಲಿಗೆ ಮಾತ್ರ ಅನ್ವಯವಿದೆ. ಯಾರ ಬಲವನ್ನು ಕಂಡುಹಿಡಿಯಬೇಕೋ ಆ ರಾಶಿಯ ಅಧಿಪತಿಯು ಉಚ್ಚ, ಮೂಲತ್ರಿಕೋಣ ಸ್ವಕ್ಷೇತ್ರ ಮುಂತಾದ ಕಡೆ ಇರಬಹುದು. ಈ ವಿವಿಧ ಪರಿಸ್ಥಿತಿಗಳಿಗೆ ನಾವು ಕೆಳಗೆ ಕೊಟ್ಟಿರುವ ಪಷ್ಟ್ಯಂಶಗಳ ಪ್ರಕಾರ ಅಂಕವೌಲ್ಯವನ್ನು ಗೊತ್ತುಪಡಿಸಬಹುದು :

| | |
|---|---|
| ಉಚ್ಚ ಕ್ಷೇತ್ರ | 60.00 |
| ಮೂಲತ್ರಿಕೋಣ | 45.00 |
| ಸ್ವಕ್ಷೇತ್ರ | 30.00 |

| | |
|---|---|
| ಮಿತ್ರಕ್ಷೇತ್ರ | 22.50 |
| ಸಮಕ್ಷೇತ್ರ | 15.00 |
| ಶತ್ರುಕ್ಷೇತ್ರ | 7.50 |
| ನೀಚಕ್ಷೇತ್ರ | 3.75 |

## 64. ಅಂಶಬಲ

ಅಂಶವೆಂದರೆ ಗ್ರಹವು ಪಡೆದಿರುವ ಸ್ಫುಟ ಅಥವಾ ಸ್ಪಷ್ಟ. 60ನೆಯ ಅಂಕದ ಪ್ರಕಾರ, ಹೆಚ್ಚಿನ ಸ್ಫುಟವುಳ್ಳ ಗ್ರಹವು ಕಡಿಮೆ ಸ್ಫುಟವುಳ್ಳ ಗ್ರಹಕ್ಕಿಂತ ಪ್ರಬಲ. ಈ ತತ್ವವನ್ನೇ ಕೊಂಚ ಲಂಬಿಸಿದರೆ, ಅತ್ಯಂತ ಹೆಚ್ಚಿನ ಸ್ಫುಟ ಪಡೆದ ಗ್ರಹವು ಅತ್ಯಂತ ಪ್ರಬಲ, ಅತ್ಯಂತ ಕಡಿಮೆ ಸ್ಫುಟದ ಗ್ರಹ ಅತ್ಯಂತ ದುರ್ಬಲ ವೆಂದೂ ಸ್ಫುಟಗಳು ಕಡಿಮೆಯಾದಂತೆ ಬಲವೂ ಕ್ಷೀಣಿಸುತ್ತದೆ ಎಂದೂ ಹೇಳ ಬಹುದು. ರಾಹು ಕೇತುಗಳನ್ನು ಬಿಟ್ಟು, ಏಳು ಗ್ರಹಗಳು ಹನ್ನೆರಡು ರಾಶಿ ಗಳ ಮೇಲೆ ಪಡೆದಿರುವ ಆಧಿಪತ್ಯವನ್ನು ಮಾತ್ರ ನಾವು ಬಲಾಬಲ ನಿಷ್ಕರ್ಷೆಗೆ ಗಮನಿಸುತ್ತೇವೆ. ಹೆಚ್ಚಿನ ಸ್ಫುಟವುಳ್ಳ ಗ್ರಹವೇ ಅತ್ಯಂತ ಪ್ರಬಲವಾದ ಕಾರಣ, ನಾವು ಆ ಗ್ರಹಕ್ಕೆ 60 ಷಷ್ಟ್ಯಂಶಗಳನ್ನು ಕೊಟ್ಟು ಅಷ್ಟು ಅದರ ಅಂಶಬಲ ಎಂದು ವಿವರಣೆ ಮಾಡಬಹುದು. ಅತ್ಯಂತ ದುರ್ಬಲ ಗ್ರಹಕ್ಕೆ ಹೀಗೆ 3.75 ಅಂಶಗಳನ್ನು ಕೊಟ್ಟು, ಉಳಿಕೆ ಗ್ರಹಗಳಿಗೆ ಈ ರೀತಿ ಬಲಾಬಲ ಗಳನ್ನು ಹಂಚಬಹುದು.

| | | | | |
|---|---|---|---|---|
| (1) | ಒಂದು ರಾಶಿಯಲ್ಲಿ ಅತ್ಯಂತ ದೂರ ಸರಿದ ಗ್ರಹಕ್ಕೆ | | 60.00 | ಷಷ್ಟ್ಯಂಶಗಳು |
| (2) | ಅದಕ್ಕಿಂತ ಕಡಿಮೆಯಾದ ಗ್ರಹಕ್ಕೆ | (1) … | 45.00 | " |
| (3) | " | (2) … | 30.00 | " |
| (4) | " | (3) … | 22.50 | " |
| (5) | " | (4) … | 15.50 | " |
| (6) | " | (5) … | 7.50 | " |
| (7) | ಎಲ್ಲಕ್ಕಿಂತ ಕಡಿಮೆ ಸಾಗಿದ ಗ್ರಹಕ್ಕೆ | | 3.75 | " |

## 65. ಕೇಂದ್ರ ಬಲ

ಅಂಕ 58ರಲ್ಲಿ ಹೇಳಿರುವಂತೆ, ಆತ್ಮಕಾರಕನಿಂದ ಯಾವ ರಾಶಿಯು ಅಧಿ ಪತಿಯು ಕ್ರಮವಾಗಿ ಕೇಂದ್ರ, ಪಣಪರ ಆಪೋಕ್ಲಿಮಗಳಲ್ಲಿರುತ್ತಾನೋ ಆ

ರಾಶಿಯು ಪೂರ್ಣಬಲ, ಅರ್ಧಬಲ ಅಥವಾ ದುರ್ಬಲ ಪಡೆಯುತ್ತಾನೆ. ಆದಕಾರಣ, ಕೇಂದ್ರ ಬಲಕ್ಕೆ ಕೆಳಗಿನಂತೆ ಬಲಗಳನ್ನು ಕೊಡಬಹುದು :—

ಆತ್ಮಕಾರಕನಿಂದ ಕೇಂದ್ರದಲ್ಲಿರುವ ಗ್ರಹಕ್ಕೆ — 60 ಷಷ್ಟ್ಯಂಶಗಳು
ಆತ್ಮಕಾರಕನಿಂದ ಫಣಪರದಲ್ಲಿರುವ ಗ್ರಹಕ್ಕೆ — 30 ಷಷ್ಟ್ಯಂಶಗಳು
ಆತ್ಮಕಾರಕನಿಂದ ಅಪೋಕ್ಲಿಮದಲ್ಲಿರುವ
ಗ್ರಹಕ್ಕೆ — 15 ಷಷ್ಟ್ಯಂಶಗಳು

ಹದಿನಾರನೆಯ ಉದಾಹರಣೆ : **ಮಾದರಿ ಜಾತಕದ ಗ್ರಹಗಳಿಗೆ ಮೂಲ ತ್ರಿಕೋಣ ಬಲ, ಅಂಶ ಬಲ ಮತ್ತು ಕೇಂದ್ರ ಬಲಗಳನ್ನು ಕಂಡುಹಿಡಿಯಿರಿ.**

ಸೂರ್ಯ : (1) ಅವನು ಕುಂಭದಲ್ಲಿದ್ದಾನೆ, ಅದು ಶತ್ರುಕ್ಷೇತ್ರ. ಅವನ ಮೂಲ ತ್ರಿಕೋಣ ಬಲವು 7.5 ಘಟಿಕಗಳು.

(2) ಸ್ಪಷ್ಟ ಪ್ರಕಾರ, ಸೂರ್ಯನು ಷಷ್ಠದಲ್ಲಿದ್ದಾನೆ. (ಮೊದಲನೆಯ ಉದಾಹರಣೆಯನ್ನು ನೋಡಿ). ಆದಕಾರಣ ಅಂಶಬಲವು 7.50 ಘಟಿಕಗಳು.

(3) ಸೂರ್ಯನು ಆತ್ಮಕಾರಕನಿಂದ ಕೇಂದ್ರ(ಪ್ರಥಮ)ದಲ್ಲಿದ್ದಾನೆ. ಅವನ ಕೇಂದ್ರಬಲವು 60.00 ಘಟಿಕಗಳು.

∴ ಸೂರ್ಯನ ಸಂಪೂರ್ಣ ಬಲ

| | |
|---|---|
| ಮೂಲತ್ರಿಕೋಣ | 7.5 |
| ಅಂಶ | 7.5 |
| ಕೇಂದ್ರ | 60.00 |
| ಮೊತ್ತ ... | 75.00 ಷಷ್ಟ್ಯಂಶಗಳು |

ಇದೇ ರೀತಿಯಲ್ಲಿ ಇತರ ಗ್ರಹಗಳಿಗೂ ಎಣಿಕೆ ಮಾಡಿದರೆ, ಕೆಳಗಿನ ಪಟ್ಟಿಯಲ್ಲಿ ಕಂಡಂತೆ ಅವುಗಳ ಬಲಾಬಲಗಳನ್ನು ಗೊತ್ತುಮಾಡಬಹುದು :

| ಗ್ರಹ | ಮೂಲತ್ರಿಕೋಣ ಬಲ | ಅಂಶ ಬಲ | ಕೇಂದ್ರ ಬಲ | ಮೊತ್ತ |
|---|---|---|---|---|
| ಸೂರ್ಯ | 7.5 (ಶತ್ರು) | 7.50 | 60.00 | 75.00 |
| ಚಂದ್ರ | 15.00 (ಸಮ) | 30.00 | 15.00 | 60.00 |
| ಮಂಗಳ | 15.00 (ಸಮ) | 3.75 | 15.00 | 33.75 |

| ಗ್ರಹ | ಮೂಲತ್ರಿಕೋಣ ಬಲ | ಅಂಶ ಬಲ | ಕೇಂದ್ರ ಬಲ | ಮೊತ್ತ |
|---|---|---|---|---|
| ಬುಧ | 15.00 (ಸಮ) | 22.50 | 60.00 | 97.50 |
| ಗುರು | 15.00 (ಸಮ) | 60.00 | 60.00 | 135.00 |
| ಶುಕ್ರ | 15.00 (ಸಮ) | 45.00 | 30.00 | 90.00 |
| ಶನಿ | 22.00 (ಮಿತ್ರ) | 15.00 | 30.00 | 67.50 |

### 66. ಚರಬಲ

ಅಂಕ 54 (4)ರಿಂದ ದ್ವಿಸ್ವಭಾವ ರಾಶಿಯು ಸ್ಥಿರಕ್ಕಿಂತಲೂ, ಸ್ಥಿರವು ಚರಕ್ಕಿಂತಲೂ ಹೆಚ್ಚು ಪ್ರಬಲ. ಆದಕಾರಣ, ಅವಕ್ಕೆ ಮುಂದೆ ಹೇಳುವಂತೆ ಬಲಾಬಲಗಳನ್ನು ಕೊಡಬಹುದು :

| | | | |
|---|---|---|---|
| ದ್ವಿಸ್ವಭಾವ ರಾಶಿ | ... | 60 | ಷಷ್ಟ್ಯಂಶಗಳು |
| ಸ್ಥಿರ ರಾಶಿ | ... | 30 | " |
| ಚರ ರಾಶಿ | ... | 15 | |

### 67. ದೃಕ್‌ಬಲ

ಇದು ಅಂಕ 55ಕ್ಕೆ ಅನ್ವಯವಾಗುತ್ತದೆ. ಯಾವ ರಾಶಿಯು ಅಧಿಪತಿ, ಗುರು ಅಥವಾ ಬುಧ ಇವರ ದೃಷ್ಟಿಗೆ ಒಳಗಾಗುತ್ತದೆಯೋ ಅಥವಾ ಯುತಿ ಪಡೆಯುತ್ತದೆಯೋ ಅದು ಪ್ರಬಲವಾಗುತ್ತದೆ. ಆದಕಾರಣ ಒಂದು ರಾಶಿಯು ಕೆಳಗೆ ಹೇಳಿರುವಂತೆ ಗ್ರಹ ದೃಷ್ಟಿಗೋ ಯುತಿಗೋ ಒಳಗಾದಾಗ ಅದಕ್ಕೆ ಅನ್ವಯವಾಗಿ ಹೇಳಿರುವಂತೆ ಬಲವನ್ನು ಗಳಿಸುತ್ತದೆ.

| | | |
|---|---|---|
| ಗುರು | ... ... | ದೃಕ್‌ಬಲ 60 ಘಟಿಕಗಳು |
| ಬುಧ | ... | ದೃಕ್‌ಬಲ 60 ಘಟಿಕಗಳು |
| ಅಧಿಪತಿ | ... | ದೃಕ್‌ಬಲ 60 ಘಟಿಕಗಳು |

### 68. ಸ್ಥಿರಬಲ

ಎರಡು ಗ್ರಹಗಳನ್ನುಳ್ಳ ರಾಶಿಯು ಒಂದು ಗ್ರಹವಿರುವ ರಾಶಿಗಿಂತ ಪ್ರಬಲ. ಮೂರು ಗ್ರಹಗಳಿರುವ ರಾಶಿ ಎರಡು ಗ್ರಹಗಳ ರಾಶಿಗಿಂತ ಪ್ರಬಲ. ಹೀಗೆ ಗ್ರಹಗಳು ಏಳು, ಸಂಪಾತ ಬಿಂದುಗಳು ಎರಡು. ಏಳು ಗ್ರಹಗಳೂ ಜತೆಗೆ ರಾಹುವೋ ಅಥವಾ ಕೇತುವೋ ಒಂದೇ ರಾಶಿಯಲ್ಲಿರುವುದು

ಅಪರೂಪ. ಆದಕಾರಣ ಕೆಳಗೆ ಹೇಳಿರುವಂತೆ ಅಂಕಿಗಳನ್ನು ಅವುಗಳಿಗೆ ಮೌಲ್ಯಗಳಾಗಿ ನಾವೇ ಕೊಡಬಹುದು.

| | | | | |
|---|---|---|---|---|
| ಎಂಟು ಗ್ರಹಗಳು | ಒಂದು ರಾಶಿಯಲ್ಲಿದ್ದಾಗ | | 165 | ಷಷ್ಟ್ಯಂಶಗಳು |
| ಏಳು | " | " | 150 | " |
| ಆರು | " | " | 135 | " |
| ಐದು | " | " | 120 | " |
| ನಾಲ್ಕು | " | " | 105 | " |
| ಮೂರು | " | " | 90 | " |
| ಎರಡು | " | " | 75 | " |
| ಒಂದು | " | " | 60 | " |
| ಯಾವ ಗ್ರಹವೂ ರಾಶಿಯಲ್ಲಿಲ್ಲದಾಗ | | | 0 | " |

ಮೇಷವನ್ನು ತೆಗೆದುಕೊಳ್ಳಿ.

(1) ಚರಬಲ :—ಚರರಾಶಿ, ಆದಕಾರಣ ಅದರ ಚರಬಲ 15 ಷಷ್ಟ್ಯಂಶಗಳು.

(2) ದೃಕ್‌ಬಲ :— ಗುರುವಿನಿಂದ, ಬುಧನಿಂದ ವೀಕ್ಷಿತ. ಒಟ್ಟು 120 ಷಷ್ಟ್ಯಂಶಗಳು.

(3) ಸ್ಥಿರಬಲ :—ಚಂದ್ರ ರಾಹು ಎರಡು ಗ್ರಹಗಳು ಮೇಷದಲ್ಲಿವೆ. ಆದಕಾರಣ ಸ್ಥಿರಬಲವು 75 ಷಷ್ಟ್ಯಂಶಗಳು.

ಮೇಷದ ಬಲ : 15+120+75=210 ಷಷ್ಟ್ಯಂಶಗಳು.

ಮಾದರಿ ಜಾತಕದಲ್ಲಿ ರಾಶಿಗಳ ಬಲಾಬಲಗಳು ಈ ಕೋಷ್ಟಕದಲ್ಲಿ ಕೊಟ್ಟಿರುವಂತೆ ಇದೆ.

| ರಾಶಿ | ಚರ ಬಲ | ದೃಕ್ ಬಲ | ಸ್ಥಿರ ಬಲ | ರಾಶಿಯ ಸ್ವಂತ ಬಲ |
|---|---|---|---|---|
| ಮೇಷ | 15.00 | 60.00 | 75.00 | 210.00 |
| ವೃಷಭ | 30.00 | 60.00 | — | 30.00 |
| ಮಿಥುನ | 60.00 | — | 60.00 | 120.00 |
| ಕರ್ಕಾಟಕ | 15.00 | 60.00 | — | 135.00 |
| | | 60.00 | | |

| ರಾಶಿ | ಚರ ಬಲ | ದೃಕ್ ಬಲ | ಸ್ಥಿರ ಬಲ | ರಾಶಿಯ ಸ್ವಂತ ಬಲ |
|---|---|---|---|---|
| ಸಿಂಹ | 30.00 | — | — | 30.00 |
| ಕನ್ಯಾ | 60.00 | — | — | 60.00 |
| ತುಲಾ | 15.00 | 60.00 | 75.00 | 210.00 |
| | | 60.00 | | |
| ವೃಶ್ಚಿಕ | 30.00 | — | — | 30.00 |
| ಧನುಸ್ | 60.00 | — | 60.00 | 120.00 |
| ಮಕರ | 15.00 | — | — | 15.00 |
| ಕುಂಭ | 30.00 | 60.00 | 90.00 | 240.00 |
| | | 60.00 | | |
| ಮೀನ | 60.00 | — | — | 60.00 |

## 69. ರಾಶಿಯ ಮೊತ್ತದ ಬಲ

ರಾಶಿಯ ಮೊತ್ತದ ಬಲವು ಸ್ವಂತ ಬಲ ಮತ್ತು ತನ್ನ ಅಧಿಪತಿಯ ಬಲ. ಮಾದರಿ ಜಾತಕದಲ್ಲಿ ಮೇಷದ ಮೊತ್ತದ ಬಲ :

| | | |
|---|---|---|
| ಅಧಿಪತಿಯ ಬಲ | ... 33.75 | ಷಷ್ಟ್ಯಂಶಗಳು |
| ರಾಶಿಯ ಸ್ವಂತ ಬಲ | ... 210.00 | ,, |
| ಒಟ್ಟು | ... 243.75 | ,, |

## 70. ವಿಶೇಷ ಬಲ

ಮೇಲಿನ ಬಲಗಳ ಜತೆಗೆ, ಯಾವ ರಾಶಿಯಲ್ಲಿ ಆತ್ಮಕಾರಕನಿರುತ್ತಾನೋ ಆ ರಾಶಿಗೆ ವಿಶೇಷ ಬಲವುಂಟಾಗುತ್ತದೆ. ಇದು ಯಾವುದೇ ಒಂದು ರಾಶಿಗೆ ಮಾತ್ರ ಸಲ್ಲತಕ್ಕದ್ದು.

ಹದಿನೆಂಟನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ವಿವಿಧ ರಾಶಿಗಳ ಮೊತ್ತದ ಬಲವನ್ನು ಕಂಡುಹಿಡಿಯಿರಿ.**

| ರಾಶಿಗಳು | ಅಧಿಪತಿಯ ಬಲ | ರಾಶಿಯ ಸ್ವಂತ ಬಲ | ಮೊತ್ತದ ರಾಶಿ ಬಲ |
|---|---|---|---|
| ಮೇಷ | 33.75 | 210.00 | 243.75 |
| ವೃಷಭ | 90.00 | 30.00 | 120.00 |
| ಮಿಥುನ | 97.50 | 120.00 | 217.50 |
| ಕಟಕ | 60.00 | 135.00 | 195.00 |
| ಸಿಂಹ | 75.00 | 30.00 | 105.00 |
| ಕನ್ಯಾ | 97.50 | 60.00 | 157.50 |
| ತುಲಾ | 90.00 | 210.00 | 300.00 |
| ವೃಶ್ಚಿಕ | 33.75 | 30.00 | 63.75 |
| ಧನುಸ್ | 135.00 | 120.00 | 255.00 |
| ಮಕರ | 67.50 | 15.00 | 82.50 |
| ಕುಂಭ | 67.50 | 240.00<br>60.00* | 367.50 |
| ಮೀನ | 135.00 | 60.00 | 195.00 |

ಮಾದರಿ ಜಾತಕದಲ್ಲಿ ರಾಶಿಗಳ ಬಲಾಬಲಗಳು ಕೆಳಗೆ ಕೊಟ್ಟಿರುವ ಕ್ರಮದಲ್ಲಿವೆ :

| | | | |
|---|---|---|---|
| ಕುಂಭ | 367.50 | ಅತ್ಯಂತ ಪ್ರಬಲ | 1 |
| ತುಲಾ | 300.00 | " | 2 |
| ಧನುಸ್ | 255.00 | " | 3 |
| ಮೇಷ | 243.75 | " | 4 |
| ಮಿಥುನ | 217.50 | " | 5 |
| ಮೀನ | 195.00 | " | 6 |
| ಕಟಕ | 195.00 | | |
| ಕನ್ಯಾ | 157.50 | | 7 |
| ವೃಷಭ ... | 120.00 | | 8 |
| ಸಿಂಹ ... | 105.00 | | 9 |
| ಮಕರ ... | 82.50 | ಅತ್ಯಂತ ದುರ್ಬಲ | 10 |
| ವೃಶ್ಚಿಕ ... | 67.75 | | |

* ಆತ್ಮಕಾರಕ ಗುರುವು ಕುಂಭದಲ್ಲಿರುವ ಕಾರಣ 60 ಷಷ್ಟ್ಯಾಂಶಗಳನ್ನು ಕುಂಭಕ್ಕೆ ಸೇರಿಸಿ.

## 71. ವಿನಾಯಿತಿಗಳು

ಕೆಲವು ನಿರ್ದಿಷ್ಟವಾದ ಬಗೆಯ ಭವಿಷ್ಯ ಹೇಳುವುದಕ್ಕೆ ಅಧಿಪತಿಗಳು ಪಡೆದಿರುವ ಸ್ಥಾನಗಳನ್ನು ಕಂಡುಹಿಡಿಯಬೇಕೆಂದು ವಿಶೇಷವಾಗಿ ಮಹರ್ಷಿಯು ಹೇಳಿರುವ ಕಡೆಗಳಲ್ಲಿ ಮೇಲೆ ಸೂಚಿಸಿರುವ ವಿಧಾನವನ್ನು ಅವಲಂಬಿಸಬಾರದು.

# ದಶಾ ಭುಕ್ತಿಗಳು

## 72. ವಿವಿಧ ದಶೆಗಳು

ಪರಾಶರಿ ಪದ್ಧತಿಯಲ್ಲಿರುವಂತೆ ಜೈಮಿನಿಯಲ್ಲೂ ಹಲವು ದಶೆಗಳಿವೆ. ಪರಾಶರಿ ಪದ್ಧತಿಯು ಗ್ರಹಗಳನ್ನೂ ಅವುಗಳಿಗಿರುವ ನಕ್ಷತ್ರಗಳನ್ನೂ ಪೂರ್ತಿ ಯಾಗಿ ಆಧರಿಸಿದ್ದರೆ, ಜೈಮಿನಿ ದಶೆಗಳಿಗೆ ರಾಶಿಗಳೇ ಪ್ರಸ್ತುತ. ಜೈಮಿನಿ ದಶೆಗಳನ್ನು ಗುಣಿಸುವಾಗ, ದಶಾ ಭುಕ್ತಿಗಳ ಕಾಲ ಗೊತ್ತುಮಾಡಲು ಪ್ರಯೋಗಿಸಬೇಕಾದ ಕ್ರಮದಿಂದ ಕೊಂಚ ಸಂದಿಗ್ಧ ಉಂಟಾದೀತು. ತುಸು ವಿಸ್ಮೃತಿಯುಂಟಾದರೂ ಇಡೀ ದಶೆಯೇ ಏರುಪೇರಾಗಬಹುದು, ತಪ್ಪು ಫಲಗಳನ್ನು ಸೂಚಿಸಬಹುದು. ಆದಕಾರಣ ಫಲ ಹೇಳುವುದಕ್ಕೆ ಮುಂಚೆ ದಶೆಗಳ ಗುಣಿತವನ್ನು ಮತ್ತೆ ಮತ್ತೆ ತಾಳೆ ನೋಡಬೇಕು.

ಜೈಮಿನಿಯು ಕೆಳಗೆ ಹೇಳಿರುವ ದಶೆಗಳನ್ನು ಹೆಸರಿಸುತ್ತಾನೆ :

(1) ಚರ ದಶೆ, (2) ಸ್ಥಿರ ದಶೆ, (3) ತ್ರಿಕೋಣ ದಶೆ, (4) ಶೂಲ ದಶೆ, (5) ರಾಶಿ ದಶೆ, (6) ಕೇಂದ್ರ ದಶೆ, (7) ವರ್ಣದಾ ದಶೆ, (8) ಉಡು ದಶೆ, (9) ನವಾಂಶ ದಶೆ, (10) ಬ್ರಹ್ಮ ದಶೆ, (11) ಯೋಗಾರ್ಧ ದಶೆ, (12) ದೃಕ್ ದಶೆ, (13) ನಕ್ಷತ್ರ ದಶೆ ಮತ್ತು (14) ಮಂಡೂಕ ದಶೆ.

## 73. ದಶೆಯ ಆಯ್ಕೆ

ಭವಿಷ್ಯಾವಧಾನಕ್ಕಾಗಿ ಯಾವ ಯಾವ ವಿಶಿಷ್ಟ ಪರಿಸ್ಥಿತಿಗಳಲ್ಲಿ ವಿವಿಧ ದಶೆಗಳು ಪ್ರಯೋಗಿಸಬೇಕು ಎಂಬ ಬಗ್ಗೆ ಮಹರ್ಷಿಯು ಖಚಿತವಾದ ಯಾವ ಸುಳಿವನ್ನೂ ಕೊಟ್ಟಿಲ್ಲ. ಅಲ್ಲಲ್ಲಿ ಪ್ರಸ್ತಾಪ ಮಾಡಿರುವ ಮೇರೆಗೆ—

ಉದಾಹರಣೆಗೆ ತಾಯಿಯ ಸಾವು ತ್ರಿಕೋಣ ದಶೆಯಲ್ಲಿ ಉಂಟಾಗುತ್ತದೆ ಎಂಬುದರ ಮೇರೆಗೆ—ಆಯಾ ಘಟನೆಗೆ ತಕ್ಕ ದಶೆಯನ್ನು ನಿಶ್ಚಯಮಾಡಿ ಕೊಳ್ಳತಕ್ಕುದಾಗಿದೆ. ವಾಚಕರನೇಕರಿಗೆ ತಿಳಿದಿರುವಂತೆ, ಪರಾಶರ ಮುನಿಯು, ಹಲವಾರು ದಶೆಗಳನ್ನು ಹೆಸರಿಸಿದ್ದರೂ ಪ್ರಾಮುಖ್ಯವನ್ನು ವಿಂಶೋತ್ತರಿಗೇ ನೀಡಿದ್ದಾನೆ. ಇದು ಅನುಭವಸಿದ್ಧವಾದ ಅಂಶ ಕೂಡ. ನಮ್ಮ ತಾತಂದಿರಾದ ದಿವಂಗತ ಪ್ರೊ. ಬಿ. ಸೂರ್ಯನಾರಾಯಣರಾಯರು ನನಗೆ ಹೇಳುತ್ತಿದ್ದರು : ಚರ ದಶೆ ತ್ರಿಕೋಣ ದಶೆಗಳನ್ನು ಎಲ್ಲ ಜಾತಕಗಳಿಗೂ ಅನ್ವಯಿಸಬಹುದು. ನವಾಂಶ ದಶೆಯ ಸಹಾಯದಿಂದ ಬದುಕಿನ ಎಲ್ಲ ಮುಖ್ಯ ಘಟನೆಗಳನ್ನೂ ಸಾಕಷ್ಟು ಕುರುತೇಟಾಗಿ ಮುನ್ನುಡಿಯಬಹುದು. ಆಯುರ್ದಾಯ ನಿಷ್ಕರ್ಷೆಗೆ ಚರ ದಶೆ ಅಥವಾ ನಿರ್ಯಾಣ ಶೂಲ ದಶೆ ಸರಿ ಎಂದು. ಜ್ಯೋತಿಷವು ಪ್ರಾಯೋಗಿಕವಾದ ವಿಜ್ಞಾನವಾದ ಕಾರಣ, ಯಾರೊಬ್ಬರ ಪಂಡಿತರ ಇಷ್ಟಕ್ಕೆ ಸಂದ ಇಂಥ **ದಶೆಯೆ** ಸರಿ ಎಂದು ವಾದಿಸುವುದು ಅಪ್ರಯುಕ್ತ. ಆಯ್ಕೆ ಯನ್ನು ಆಯಾ ಮೇಧಾವಂತ ವಾಚಕರ ವೀಕ್ಷಣೆಗೆ ಬಿಟ್ಟು, ಅವರು ಸ್ವಂತ ಅನುಭವ ಮತ್ತು ಜ್ಯೋತಿಷವನ್ನೇ ಆಜೀವ ಅಧ್ಯಯನ ಮಾಡುವ ಪಂಡಿತರು ಅನುಭವಗಳ ನೇರಕ್ಕೆ ಮಾಡಬೇಕು. ನನ್ನ ಸ್ವಂತ ಒಲವು ಚರ ದಶೆ ಮತ್ತು ಸ್ಥಿರ ದಶೆಗಳತ್ತ. ಈ ತೀರ್ಮಾನವನ್ನು ನನ್ನ ಅಲ್ಪ ಅಧ್ಯಯನ ಮತ್ತು ಅನುಭವದ ಆಧಾರದ ಮೇಲೆ ಮಾಡಿದ್ದೇನೆ.

ಆದಕಾರಣ, ಈ ಪುಸ್ತಕದಲ್ಲಿ ಹೇಳಿರುವ ಎಲ್ಲ ದಶೆಗಳನ್ನೂ ವಿವರಿಸ ಬಯಸುವುದಿಲ್ಲ. ಚರ ದಶೆಯನ್ನು ಪೂರ್ತಿಯಾಗಿ ಚರ್ಚಿಸಿ, ತ್ರಿಕೋಣ ದಶೆ, ಸ್ಥಿರ ದಶೆ, ರಾಶಿ ದಶೆ, ಬ್ರಹ್ಮ ದಶೆ, ವರ್ಣದಾ ದಶೆ ಮತ್ತು ನಿರ್ಯಾಣ ಶೂಲ ದಶೆಗಳನ್ನು ಕುರಿತು ಸಂಕ್ಷೇಪವಾಗಿ ಪ್ರಸ್ತಾಪಿಸುತ್ತೇನೆ.

### 74. ಚರ ದಶೆ

ಈ ದಶೆಯು ಮಹರ್ಷಿಗೆ ಅಚ್ಚುಮೆಚ್ಚಿನದು ಕಾಣುತ್ತದೆ. ರಾಶಿಗಳನ್ನು ಎರಡು ವಿಂಗಡ ಮಾಡಿದೆ, ಅಂದರೆ ವಿಷಮ ಪಾದ (ಬೆಸದ ಗುಂಪು) ಮತ್ತು ಸಮ ಪಾದ (ಸಮದ ಗುಂಪು). ಇದರ ಉದ್ದೇಶ ದಶೆಯ ಕ್ರಮವನ್ನೂ ದಶೆಯ ಅವಧಿಯ ವರ್ಷಗಳನ್ನೂ ಗೊತ್ತುಮಾಡುವುದು.

### 75. ವಿಷಮ ಪಾದ ರಾಶಿಗಳು

ಮೇಷ, ವೃಷಭ, ಮಿಥುನ, ತುಲ, ವೃಶ್ಚಿಕ, ಧನುಸ್ ವಿಷಮ ಪಾದಕ್ಕೆ ಸೇರಿದ ರಾಶಿಗಳು.

## 76. ಸಮ ಪಾದ ರಾಶಿಗಳು

ಕರ್ಕಾಟಕ, ಸಿಂಹ, ಕನ್ಯಾ, ಮಕರ, ಕುಂಭ ಮತ್ತು ಮೀನ ಸಮ ಪಾದಕ್ಕೆ ಸೇರಿದ ರಾಶಿಗಳು.

ಸ್ಪಷ್ಟೀಕರಣಾರ್ಥವಾಗಿ 75 ಮತ್ತು 76ನೆಯ ಅಂಕಗಳಲ್ಲಿ ಹೇಳಿರುವ ರಾಶಿಗಳನ್ನು ಕ್ರಮವಾಗಿ ಸವ್ಯ ಮತ್ತು ಅಪಸವ್ಯ ಎಂದು ಕರೆಯೋಣ.

## 77. ದಶೆಗಳ ಕ್ರಮ

ಲಗ್ನದಿಂದ ನವಮವು ಸವ್ಯದ ಗುಂಪಿಗೆ ಸೇರಿದ್ದಾದರೆ, ದಶೆಯ ಅನು ಕ್ರಮವು ನೇರವಾದದ್ದು ಅಥವಾ ಗಡಿಯಾರದಂತೆ : ಮತ್ತು ಮೊದಲ ದಶೆಯು ಲಗ್ನರಾಶಿಯಿಂದ ಪ್ರಾರಂಭವಾಗುತ್ತದೆ. ಲಗ್ನದಿಂದ ನವಮವು ಅಪಸವ್ಯದ ಗುಂಪಿಗೆ ಸೇರಿದ್ದಾದರೆ, ದಶಾನುಕ್ರಮವು ತಿರುಗುಮುರುಗು ಅಥವಾ ಗಡಿಯಾರಕ್ಕೆ ವಿರೋಧ ರೀತಿಯದು ಮತ್ತು ಮೊದಲ ದಶೆಯು ಲಗ್ನರಾಶಿಯದು. ಉದಾಹರಣೆಗೆ (1) ಮೇಷ ಮತ್ತು (2) ಕರ್ಕಾಟಕ ಲಗ್ನಗಳನ್ನು ತೆಗೆದುಕೊಳ್ಳಿ. ಮೊದಲನೆಯದರಲ್ಲಿ, ಲಗ್ನದಿಂದ ನವಮವಾದ ಧನುಸ್ ಸವ್ಯದ ಗುಂಪಿಗೆ ಸೇರುತ್ತದೆ. ಮೊದಲನೆಯ ಮತ್ತು ತರುವಾಯ ಬರುವ ದಶೆಗಳು ಮೇಷ, ವೃಷಭ ಇತ್ಯಾದಿ. ಎರಡನೆಯದರಲ್ಲಿ (ಕಟಕ) ಲಗ್ನದಿಂದ ನವಮವು ಅಪಸವ್ಯ ಗುಂಪಿಗೆ ಸೇರಿದ ಮೀನವಾಗುತ್ತದೆ. ಮೊದಲನೆಯ ಮತ್ತು ತರುವಾಯ ಬರುವ ದಶೆಗಳು ಕಟಕ, ಮಿಥುನ, ವೃಷಭ ಇತ್ಯಾದಿ.

## 78. ದಶಾವಧಿ

ಚರ ದಶೆಯ ಅವಧಿಯು ನಿಯತಾಂತವಲ್ಲ. ಒಬ್ಬ ಅಧಿಪತಿಯು ತನ್ನ ರಾಶಿಗೆ ಸಂಬಂಧಪಟ್ಟಂತೆ ಎಲ್ಲಿರುತ್ತಾನೋ ಆ ಸನ್ನಿವೇಶದ ಪ್ರಕಾರ ಅದು ಬದಲಾವಣೆಯಾಗುತ್ತದೆ. ಒಂದು ರಾಶಿಯ ದಶಾವಧಿಯು 5–ನಕ್ಕೆ ಸಮ. ನ ಅಂದರೆ ಸಂಬಂಧಪಟ್ಟ ರಾಶಿಯಿಂದ ರಾಶ್ಯಾಧಿಪತಿಯಿರುವ ಸ್ಥಳಕ್ಕೆ ಇರುವ ಅಂತರ (ರಾಶಿಗಳಲ್ಲಿ) : ಸಂಬಂಧಪಟ್ಟ ರಾಶಿಯನ್ನು ಸವ್ಯಾಪಸವ್ಯ ರಾಶಿಗಳ ಯಾವ ಗುಂಪಿಗೆ ಸೇರುತ್ತದೆಯೋ ಆ ಪ್ರಕಾರ ಗಡಿಯಾರ ದಂತೆಯೋ ಅದಕ್ಕೆ ಪ್ರತಿಯಾಗಿಯೋ ಎಣಿಸಬೇಕು. ಒಂದು ಕುಂಡಲಿಯನ್ನು ತೆಗೆದುಕೊಳ್ಳೋಣ. ಲಗ್ನ ಮೇಷ, ಲಗ್ನಾಧಿಪತಿ ಕುಜ ಸಿಂಹದಲ್ಲಿದ್ದಾನೆ.

ಶುಕ್ರ ವೃಶ್ಚಿಕದಲ್ಲೂ, ಚಂದ್ರ ಸಿಂಹದಲ್ಲೂ ಇದ್ದಾರೆ ; ಲಗ್ನದಿಂದ ನವಮವು ಧನುಸ್ ಸವ್ಯ ಗುಂಪಿಗೆ ಸೇರುತ್ತದೆ. ಆದಕಾರಣ, ದಶಾಕ್ರಮವು ಲಗ್ನದಿಂದ ಪ್ರಾರಂಭವಾಗಿ ನೇರವಾಗಿ ಸಾಗುತ್ತದೆ. ಲಗ್ನವು ಮೇಷವಾದ ಕಾರಣ, ಮೊದಲನೆಯ ದಶೆಯು ಲಗ್ನರಾಶಿಯಾದ ಮೇಷ ದಶೆ. ಮೇಷಾಧಿಪತಿ ಕುಜ ಸಿಂಹದಲ್ಲಿದ್ದಾನೆ. ಮೇಷವು ಸವ್ಯವಾದ ಕಾರಣ, ಮೇಷದಿಂದ ಸಿಂಹದ ವರೆಗೆ ನೇರ ಕ್ರಮದಲ್ಲಿ ಎಣಿಸಿದರೆ, ನ ಗೆ ಐದು ಸಮವಾಗುತ್ತದೆ. ಆದ ಕಾರಣ ಮೇಷ ದಶೆಯು ನಾಲ್ಕು ವರ್ಷಗಳಿಗೆ (5–1) ಸಮನಾಗುತ್ತದೆ. ಮುಂದಿನ ರಾಶಿ ದಶೆಯಾದ ಮಿಥುನವನ್ನೂ ಇದೇ ರೀತಿಯಲ್ಲಿ ಗುಣಿಸ ಬಹುದು. ಈಗ ಕರ್ಕಾಟಕ ದಶೆಯನ್ನು ತಿಳಿಯೋಣ. ಕರ್ಕಾಟಕ ಅಪಸವ್ಯದ ಗುಂಪಿಗೆ ಸೇರುತ್ತದೆ. ರಾಶ್ಯಾಧಿಪತಿ ಚಂದ್ರ ಸಿಂಹದಲ್ಲಿದ್ದಾನೆ. ಕರ್ಕಾಟಕ ದಿಂದ ಅಪಸವ್ಯವಾಗಿ ಎಣಿಸಬೇಕು. ಅಂತರವು 12 (ನ) ಆಗುತ್ತದೆ. ಕರ್ಕಾಟಕ ದಶೆಯು ಅವಧಿಯು 11 ವರ್ಷ (ನ–1) ಗಳಾಗುತ್ತವೆ.

ಈಗ ಮಕರ ಲಗ್ನದ ಜಾತಕವನ್ನು ತೆಗೆದುಕೊಳ್ಳೋಣ. ಶನಿ, ಕುಜ, ಗುರು ಕ್ರಮವಾಗಿ ಸಿಂಹ, ಮೇಷ, ಕನ್ಯಾ ರಾಶಿಗಳಲ್ಲಿದ್ದಾರೆ. ಲಗ್ನದಿಂದ ನವಮ ರಾಶಿಯು ಅಪಸವ್ಯದ ಗುಂಪಿಗೆ ಸೇರುತ್ತದೆ. ಪರಿಣಾಮವಾಗಿ, ಮಕರ ಲಗ್ನದಿಂದ ಪ್ರಾರಂಭವಾಗುವ ಮೊದಲ ದಶೆಯು ತರುವಾಯ ಹಿಮ್ಮುಖವಾಗಿ ಇತರೆ ದಶೆಗಳನ್ನು ಎಣಿಸಿದರೆ ಧನುಸ್, ವೃಶ್ಚಿಕ, ತುಲಾ ಮುಂತಾದವು ಬರುತ್ತವೆ. ಮಕರವು ಅಪಸವ್ಯ ಗುಂಪಿನ ರಾಶಿಯಾದ ಕಾರಣ, ಮಕರದಿಂದ ಶನಿಗೆ ಹಿಮ್ಮುಖವಾಗಿ ಎಣಿಸಿದರೆ 6 (ನ) ದೊರಕುತ್ತದೆ. ಮಕರ ದಶೆಯು ಐದು (6–1) ವರ್ಷಗಳಾಗುತ್ತವೆ. ಮುಂದಿನ ದಶಾ ರಾಶಿ ಯಾದ ಧನುಸ್ ಸವ್ಯದ ಗುಂಪಿಗೆ ಸೇರಿದ್ದು. ಅದರ ಅಧಿಪತಿ ಗುರು ಮೇಷ ದಲ್ಲಿದ್ದಾನೆ. ಆದಕಾರಣ ಧನುಸ್ಸಿನಿಂದ ಮೇಷಕ್ಕೆ ನೇರವಾಗಿ ಎಣಿಸಿದರೆ, ನ ಗೆ 5 ಸಮವಾಗುತ್ತದೆ. ಧನುಸ್ ದಶೆಯು 4 (5–1) ಆಗುತ್ತದೆ. ಇದೇ ರೀತಿ ಇತರ ಗ್ರಹಗಳಿಗೂ ದಶಾವಧಿಗಳನ್ನು ಗೊತ್ತುಹಚ್ಚಬೇಕು.

## 79. ದಶಾವಧಿಯಲ್ಲಿ ಇತರೆ ವ್ಯತ್ಯಾಸಗಳು

ಸಾಧಾರಣವಾಗಿ ದಶಾವಧಿಯನ್ನು ಅಂಕ 78ರಲ್ಲಿ ಕೊಟ್ಟಿರುವ ಸೂತ್ರವು ಸೂಚಿಸುತ್ತದೆ. ಆದರೆ ಈ ದಶಾವಧಿಯು ಅಧಿಪತಿಗಳ ಶುಭ ಅಥವಾ ಪಾಪ ಸನ್ನಿವೇಶಗಳ ನೇರಕ್ಕೆ ಅನುಗುಣವಾಗಿ ಹೆಚ್ಚು ಕಡಿಮೆ ಆಗುತ್ತದೆ. ಹೇಗೆಂದರೆ,

ಒಂದು ರಾಶಿಯಲ್ಲಿ ಆ ರಾಶ್ಯಾಧಿಪತಿಯೇ ಇದ್ದಾಗ, ಆ ದಶಾವಧಿಯು 12 ವರ್ಷಗಳಾಗುತ್ತದೆ. ರಾಶ್ಯಾಧಿಪತಿಯು ಉಚ್ಚನಾದಾಗ, ಅಂಕ 78ರ ಪ್ರಕಾರ ಪಡೆದ ರಾಶಿ ದಶಾವಧಿಯನ್ನು ಒಂದು ವರ್ಷದಷ್ಟು ಹೆಚ್ಚಿಸಬೇಕು. ರಾಶ್ಯಾಧಿಪತಿಯು ನೀಚನಾದರೆ ರಾಶಿದಶೆಯ ಕಾಲವನ್ನು ಒಂದು ವರ್ಷದಷ್ಟು ಕುಗ್ಗಿಸಬೇಕು.

### 80. ಎರಡು ಆಧಿಪತ್ಯಗಳನ್ನು ಪಡೆಯುವುದರಿಂದಾಗುವ ವ್ಯತ್ಯಾಸಗಳು

ಜೈಮಿನಿ ಪ್ರಕಾರ, ಕುಂಭ ಮತ್ತು ವೃಶ್ಚಿಕ ರಾಶಿಗಳಿಗೆ ಇಬ್ಬಿಬ್ಬರು ಅಧಿಪತಿಗಳಾಗುತ್ತಾರೆ. ವೃಶ್ಚಿಕಕ್ಕೆ ಕುಜ ಕೇತು ಒಡೆಯರು. ಕುಂಭಕ್ಕೆ ಶನಿ ರಾಹು ಒಡೆಯರು. ಈ ದ್ವ್ಯಾಧಿಪತ್ಯದ ಕಾರಣ ವೃಶ್ಚಿಕ ಕುಂಭಗಳ ದಶಾವಧಿಗಳನ್ನು ಗುಣಿಸುವಾಗ ಕೆಲವು ವಿಶೇಷ ಗಣನೆಗಳು ಆವಶ್ಯಕವಾಗುತ್ತವೆ.

### 81. ಸ್ವರಾಶಿಯಲ್ಲಿ ಇಬ್ಬರು ಅಧಿಪತಿಗಳ ಯುತಿ

ಕುಜ ಕೇತುಗಳಾಗಲಿ ಶನಿ ರಾಹುಗಳಾಗಲಿ ಸ್ವಕ್ಷೇತ್ರದಲ್ಲಿದ್ದರೆ, ಆಗ ವೃಶ್ಚಿಕ ಕುಂಭ ರಾಶಿಗಳ ದಶಾವಧಿಯು ತಲಾ 12 ವರ್ಷಗಳಾಗುತ್ತವೆ.

### 82. ಇತರೆ ರಾಶಿಗಳಲ್ಲಿ ಕುಜ ಕೇತು ಯುತಿ

ತಮ್ಮ ಕ್ಷೇತ್ರವಲ್ಲದ ಇತರೆ ರಾಶಿಗಳಲ್ಲಿ ಕುಜ ಕೇತು ಯುತಿಯಾದರೆ, ಆಗ (ವೃಶ್ಚಿಕವು ಸವ್ಯ ಗುಂಪಿಗೆ ಸೇರಿರದ ಕಾರಣ) ಸವ್ಯ ಕ್ರಮದಲ್ಲಿ ವೃಶ್ಚಿಕದಿಂದ ಇಷ್ಟು ರಾಶಿಯವರೆಗೆ ಎಣಿಸಿ. ವೃಶ್ಚಿಕದ ದಶಾವಧಿಯು ಅಂಕ 78ರಲ್ಲಿ ಹೇಳಿರುವಂತೆ ಆಗುತ್ತದೆ.

### 83. ಇತರೆ ರಾಶಿಗಳಲ್ಲಿ ಶನಿ ರಾಹು ಯುತಿ

ಕುಂಭ ಬಿಟ್ಟು ಇತರೆ ಯಾವುದೇ ರಾಶಿಯಲ್ಲಿ ಶನಿ ರಾಹು ಯುತಿಯಾದರೆ (ಕುಂಭವು ಅಪಸವ್ಯ ಗುಂಪಿಗೆ ಸೇರಿದ ಕಾರಣ), ಆಗ ಕುಂಭದಿಂದ ಇಷ್ಟು ರಾಶಿಗೆ ಅಪಸವ್ಯ ಕ್ರಮದಲ್ಲಿ ಪ್ರತಿಯಾಗಿ ಎಣಿಸಿ. ಕುಂಭದ ದಶಾವಧಿಯು ಅಂಕ 78ರ ಪ್ರಕಾರವಾಗುತ್ತದೆ.

### 84. ಸ್ವರಾಶಿಯಲ್ಲೊಬ್ಬ ಅಧಿಪತಿ, ಇತರೆ ರಾಶಿಯಲ್ಲಿ ಇನ್ನೊಬ್ಬ ಅಧಿಪತಿ

ಇಬ್ಬರು ಅಧಿಪತಿಗಳ ಪೈಕಿ (ಕುಜ ಅಥವಾ ಕೇತು ಅಥವಾ ಶನಿ ಅಥವಾ ರಾಹು) ಒಬ್ಬ ಸ್ವರಾಶಿಯಲ್ಲೂ ಇನ್ನೊಬ್ಬ ಅನ್ಯ ರಾಶಿಯಲ್ಲೂ

ಇದ್ದಾಗ, ಮುಂಚಿನ ಗ್ರಹವನ್ನು ಕಡೆಗಂಡು ಕಡೆಯ ಗ್ರಹವನ್ನು ಪುರಸ್ಕರಿಸಿ: ಅಂದರೆ, ವೃಶ್ಚಿಕದಲ್ಲಿ ಕುಜನೂ ಮೀನದಲ್ಲಿ ಕೇತುವೂ ಇದ್ದಾಗ ಕುಜನನ್ನು ಕಡೆಗಂಡು ಕೇತುವನ್ನು ಪುರಸ್ಕರಿಸಿ. ವೃಶ್ಚಿಕದ ದಶಾವಧಿಯು ಅಂಕ 78 ರಂತೆ, ಕೇತುವಿನಿಂದ ನಿಷ್ಕರ್ಷೆಯಾಗುತ್ತದೆ.

## 85. ಉಭಯ ಅಧಿಪತಿಗಳೂ ಅನ್ಯ ರಾಶಿಗಳಲ್ಲಿ

ಕುಜ ಕೇತುಗಳೂ ಅಥವಾ (ಶನಿ ರಾಹುಗಳೂ) ಅನ್ಯ ರಾಶಿಗಳಲ್ಲಿದ್ದರೆ, ಸಂಗಡಿಗನನ್ನು ಪಡೆದ ಗ್ರಹವನ್ನು ಪುರಸ್ಕರಿಸಿ. ಉಭಯತ್ರರಿಗೂ ಸಂಗಡಿಗರಿದ್ದರೆ, ಹೆಚ್ಚು ಸಂಗಡಿಗರಿದ್ದವರನ್ನು ಪುರಸ್ಕರಿಸಿ. ಉಭಯತ್ರರಿಗೂ ಸಮಾನ ಸಂಖ್ಯೆಯ ಸಂಗಡಿಗರಿದ್ದರೆ, ಆಯಾ ರಾಶಿಯ ಚರ ಸ್ಥಿರ ದ್ವಿಸ್ವಭಾವಗಳ ಅಪೇಕ್ಷ್ಯ ರಾಶಿಬಲವನ್ನು ಪಡೆದ ಗ್ರಹಕ್ಕೆ ಪುರಸ್ಕಾರ ನೀಡಿ (ರಾಶಿತಃ ಪ್ರಾಣಃ). ಚರಕ್ಕಿಂತ ಸ್ಥಿರ ಪ್ರಬಲ, ಸ್ಥಿರಕ್ಕಿಂತ ದ್ವಿಸ್ವಭಾವ ಪ್ರಬಲ. ರಾಶಿ ಬಲದಲ್ಲೂ ಉಭಯತ್ರರು ಸಮಾನರಾಗಿದ್ದರೆ, ಹೆಚ್ಚು ವರ್ಷಗಳ ಅವಧಿಯನ್ನು ಕೊಡುವ ಗ್ರಹವನ್ನು ಪುರಸ್ಕರಿಸಿ. ಒಂದು ವೇಳೆ ಹೆಚ್ಚು ವರ್ಷಾವಧಿಯನ್ನು ಕೊಡುವ ಅಧಿಪತಿಯು ಪರಮನೀಚನಾಗಿದ್ದರೆ ಮತ್ತು ಇನ್ನೊಬ್ಬ ಅಧಿಪತಿಯು ಉಚ್ಚನಾಗಿದ್ದರೆ, ಕಡೆಯವನಿಗೆ ಪುರಸ್ಕಾರ ನೀಡಿ. ಅಂಕ 79ರ ಪ್ರಕಾರ ಒಂದು ವರ್ಷ ಹೆಚ್ಚಿಸಿ.

ಹತ್ತೊಂಭತ್ತನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಚರದಶೆಗಳನ್ನೂ ಅವುಗಳ ಅವಧಿಗಳನ್ನೂ ಕಂಡುಹಿಡಿಯಿರಿ.**

**ದಶೆಗಳ ಅನುಕ್ರಮ :** ಲಗ್ನದಿಂದ ನವಮ ಮಕರ. ಅದು ಅಪಸವ್ಯದ ಗುಂಪಿಗೆ ಸೇರುತ್ತದೆ. ಆದ್ದರಿಂದ, ಲಗ್ನದಿಂದ ಪ್ರಾರಂಭವಾಗುವ ಮೊದಲ ದಶೆಯು ವೃಷಭ. ಹಿಮ್ಮುಖವಾಗಿ ಎಣಿಸಿದರೆ, ವೃಷಭ, ಮೇಷ, ಮೀನ, ಕುಂಭ, ಮಕರ ಇತ್ಯಾದಿ.

**ದಶಾವಧಿಗಳು :** ಮೊದಲನೆಯ ದಶಾರಾಶಿಯಾದ ತುಲಾ ತೆಗೆದುಕೊಳ್ಳೋಣ. ಅದು ಸವ್ಯದ ಗುಂಪಿಗೆ ಸೇರುತ್ತದೆ (ಅಂಕ 65). ಆದ್ದರಿಂದ ಎಣಿಕೆಯು ನೇರವಾಗಿರಬೇಕು. ವೃಷಭಾಧಿಪತಿ ಶುಕ್ರ ವೃಷಭದಿಂದ ಅಷ್ಟಮ (ನ) ಧನುಸ್ಸಿನಲ್ಲಿದ್ದಾನೆ. ಆದಕಾರಣ ವೃಷಭ ದಶಾವಧಿಯು ನ–1 ಅಥವಾ 7 ವರ್ಷಗಳು. ಮೇಷವನ್ನು ತೆಗೆದುಕೊಳ್ಳಿ. ಅದು ದ್ವಿತೀಯ ರಾಶಿ. ಅದು ಸವ್ಯ ಗುಂಪಿನದು. ನೇರವಾದ ಎಣಿಕೆ. ಮೇಷಾಧಿಪತಿ ಕುಜ. ಮೇಷ

ದಿಂದ ಸಪ್ತಮ (ನ) ವಾದ ತುಲಾದಲ್ಲಿದ್ದಾನೆ. ಆದಕಾರಣ, ಮೇಷ ದಶಾವಧಿ 7–1 = 6 ವರ್ಷ. ಮೂರನೆಯದು ಮೀನ ದಶೆ. ಅದು ಅಪಸವ್ಯ ರಾಶಿ, ಎಣಿಕೆ ಹಿಮ್ಮುಖವಾಗಿರಬೇಕು. ಮೀನಾಧಿಪತಿ ಗುರು ಮೀನದಿಂದ (ಹಿಮ್ಮುಖವಾಗಿ ಎಣಿಸಿದರೆ) ದ್ವಿತೀಯ (ನ)ದಲ್ಲಿದ್ದಾನೆ. ಆದಕಾರಣ ಮೀನ ದಶಾವಧಿಯು 2–1 = 1 ವರ್ಷ. ಇಬ್ಬರ ಆಧಿಪತ್ಯಕ್ಕೊಳಗಾದ ಕುಂಭವನ್ನು ತೆಗೆದುಕೊಳ್ಳೋಣ. ಕುಂಭಾಧಿಪತಿಗಳಾದ ಶನಿ ರಾಹುಗಳ ಪೈಕಿ ರಾಹುಚಂದ್ರನ ಸಂಗಡ ಇದ್ದಾನೆ. ಆದಕಾರಣ ರಾಹುವನ್ನು ಪುರಸ್ಕರಿಸಿ (ಅಂಕ 85). ಕುಂಭವು ಅಪಸವ್ಯ ರಾಶಿ. ಆದಕಾರಣ, ಕುಂಭದಿಂದ ಗ್ರಹಸ್ಥ ರಾಶಿಯವರೆಗೆ (ನ) 11 ಆಗುತ್ತದೆ. ಆದಕಾರಣ ಕುಂಭ ದಶಾವಧಿಯು 11–1 = 10 ವರ್ಷಗಳಾಗುತ್ತವೆ. ಇಬ್ಬರೊಡೆಯರ ಮತ್ತೊಂದು ರಾಶಿ ಯಾದ ವೃಶ್ಚಿಕದಲ್ಲಿ ಕುಜ ಕೇತುಗಳು ಯುತಿಯುಲ್ಲಿದ್ದಾರೆ. ಆದಕಾರಣ ಅಂಕ 83ರ ಪ್ರಕಾರ, ವೃಶ್ಚಿಕದಿಂದ (ಅದು ಸವ್ಯವಾದ ಕಾರಣ ನೇರವಾಗಿ) ಕುಜ ಕೇತುಗಳು ಯುತಿಗೊಂಡಿರುವ ತುಲಾವರೆಗೆ ಎಣಿಸಿದರೆ ನ 12 ವರ್ಷ ಗಳಾಗುತ್ತವೆ. ಆದುದರಿಂದ ವೃಶ್ಚಿಕ ದಶಾವಧಿ 12 – 1 = 11 ವರ್ಷಗಳು. ಇದೇ ರೀತಿಯಲ್ಲಿ ಇತರ ರಾಶಿಗಳಿಗೂ ಗುಣಿಸಿದರೆ, ಮಾದರಿ ಜಾತಕದಲ್ಲಿ ಈ ಚರದಶೆಗಳು ಲಭಿಸುತ್ತವೆ:

| ದಶೆ | ವರ್ಷಗಳು |
|---|---|
| ವೃಷಭ | 7–0–0 |
| ಮೇಷ | 6–0–0 |
| ಮೀನ | 1–0–0 |
| ಕುಂಭ | 10–0–0 |
| ಮಕರ | 7–0–0 |
| ಧನುಸ್ | 2–0–0 |
| ವೃಶ್ಚಿಕ | 11–0–0 |
| ತುಲಾ | 2–0–0 |
| ಕನ್ಯಾ | 7–0–0 |
| ಸಿಂಹ | 6–0–0 |
| ಕಟಕ | 3–0–0 |
| ಮಿಥುನ | 8–0–0 |

ಯಾವ ರಾಶಿಯಲ್ಲೂ ಅವರ ಸ್ವಂತ ಅಧಿಪತಿಯಾಗಲಿ ಉಚ್ಚ ಅಥವಾ ನೀಚ ಗ್ರಹವಾಗಲಿ ಇಲ್ಲ. ಆದಕಾರಣ, ಮೇಲಿನ ಯಾವ ದಶಾವಧಿಯಲ್ಲೂ ಹೆಚ್ಚು ಕಡಿಮೆಯೂ ಇಲ್ಲ.

ಇಪ್ಪತ್ತನೆಯ ಉದಾಹರಣೆ: **ಬೆಂಗಳೂರಿನಲ್ಲಿ 1912ನೆಯ ವರ್ಷ ಆಗಸ್ಟ್ 8ರಂದು ಸಂಜೆ 7–35 (ಇಂಡಿಯನ್ ಸ್ಟ್ಯಾಂಡರ್ಡ್ ಟೈಂ) ಗಂಟೆಗೆ ಜನಿಸಿದ ವ್ಯಕ್ತಿಯ ಜಾತಕದಲ್ಲಿ ಚರದಶೆಗಳನ್ನು ಕಂಡುಹಿಡಿಯಿರಿ. ಗ್ರಹಗಳ ಸ್ಥಿತಿಯನ್ನು ಕೆಳಗಿನ ಕುಂಡಲಿಯಲ್ಲಿ ಕೊಟ್ಟಿದೆ.**

| ರಾಹು | | ಚಂದ್ರ<br>ಶನಿ | |
|---|---|---|---|
| ಲಗ್ನ | ರಾಶಿ | | ಸೂರ್ಯ |
| | | | ಕುಜ, ಬುಧ<br>ಶುಕ್ರ |
| | ಗುರು | | ಕೇತು |

### ದಶೆಗಳ ಕ್ರಮ

ಮೇಲಿನ ಜಾತಕದಲ್ಲಿ ಸವ್ಯದ ಗುಂಪಿಗೆ ಸೇರಿದ ತುಲಾ ಲಗ್ನದಿಂದ ನವಮವಾಗುತ್ತದೆ. ಪರಿಣಾಮವಾಗಿ, ಲಗ್ನದಿಂದ ಪ್ರಾರಂಭವಾಗುವ ಕುಂಭ ದಶೆಯು ತರುವಾಯ ನೇರ ಕ್ರಮದಲ್ಲಿ ಮೀನ, ಮೇಷ ಮುಂತಾದವು ಬರುತ್ತವೆ.

### ದಶೆಗಳ ಅವಧಿಗಳು

ಮೊದಲನೆಯ ದಶಾರಾಶಿಯಾದ ಕುಂಭಕ್ಕೆ ಇಬ್ಬರು ಅಧಿಪತಿಗಳು. ಶನಿ ರಾಹುಗಳು ಸ್ವರಾಶಿಗಳಲ್ಲೂ ಇಲ್ಲ, ಯುತಿಗೊಂಡೂ ಇಲ್ಲ. ಬೇರೆ ಬೇರೆ ರಾಶಿಗಳಲ್ಲಿದ್ದಾರೆ. ಆದಕಾರಣ ಅಂಕ 85ರ ಅನ್ವಯ ಶನಿಯು ಸಂಗಡದ ಗ್ರಹದೊಂದಿಗೆ ಇರುವ ಕಾರಣ, ಪುರಸ್ಕೃತನಾಗುತ್ತಾನೆ. ಕುಂಭವು ಅಪಸವ್ಯ ರಾಶಿ. ಆದಕಾರಣ ಕುಂಭದಿಂದ (ಹಿಮ್ಮುಖವಾಗಿ) ಶನಿಯ ತನಕ ಎಣಿಸಿದರೆ, ನಗೆ 10 ಲಭಿಸುತ್ತದೆ. ಆದುದರಿಂದ ಕುಂಭ ದಶಾವಧಿಯು $10-1=9$ ವರ್ಷಗಳು. ಎರಡನೆ ರಾಶಿಯಾದ ಮೀನವನ್ನು ತೆಗೆದುಕೊಂಡರೆ, ಅದೂ

ಅಪಸವ್ಯಕ್ಕೆ ಸೇರುತ್ತದೆ. ಅದರ ಅಧಿಪತಿ ಗುರು ವೃಶ್ಚಿಕದಲ್ಲಿದ್ದಾನೆ. ಮೀನ ದಿಂದ (ಹಿಮ್ಮುಖವಾಗಿ) ಗುರುವಿನ ಸ್ಥಾನದವರೆಗೆ ಎಣಿಸಿದರೆ ನ ಗೆ 5 ಸಮ ವಾಗುತ್ತದೆ. ಆದಕಾರಣ ಮೀನದ ದಶಾವಧಿಯು $5-1=4$. ಕರ್ಕಾಟಕ ವನ್ನು ತೆಗೆದುಕೊಳ್ಳೋಣ. ಅದರ ಅಧಿಪತಿ ಚಂದ್ರ ವೃಷಭದಲ್ಲಿದ್ದಾನೆ. ಕರ್ಕಾಟಕದಿಂದ ಚಂದ್ರನವರೆಗೆ (ಕಟಕ ಅಪಸವ್ಯ ರಾಶಿಯಾದುದರಿಂದ ಹಿಮ್ಮುಖವಾಗಿ) ಎಣಿಸಿದರೆ, ನಮಗೆ ನ ಗೆ 3 ಲಭಿಸುತ್ತದೆ. ಆದಕಾರಣ ನ$-1=2$. ಕರ್ಕಾಟಕಾಧಿಪತಿ ಉಚ್ಚನಾಗಿರುವುದರ ದೆಸೆಯಿಂದ, ದಶಾವಧಿ 3 ವರ್ಷಗಳಾಗುತ್ತವೆ. ಮತ್ತೆ ವೃಶ್ಚಿಕವನ್ನು ತೆಗೆದುಕೊಳ್ಳೋಣ. ಅದರ ಉಭಯ ಅಧಿಪತಿಗಳಾದ ಕುಜ ಕೇತುಗಳು ಬೇರೆ ಬೇರೆ ರಾಶಿಗಳಲ್ಲಿರುವುದ ರಿಂದ, ಸಂಗಡಿಗರಿಂದ ಕೂಡಿದ ಕುಜನಿಗೇ ಪುರಸ್ಕಾರ. ಕೇತು ಒಂಟಿಯಾಗಿ ದ್ದಾನೆ. ವೃಶ್ಚಿಕದಿಂದ ಕುಜನವರೆಗೆ (ವೃಶ್ಚಿಕ ಸವ್ಯವಾದ ಕಾರಣ ನೇರವಾಗಿ) ಎಣಿಸಿದರೆ, ನಮಗೆ (ನ) 10 ದೊರೆಯುತ್ತದೆ. ಆದಕಾರಣ ವೃಶ್ಚಿಕದ ದಶಾವಧಿ $10-1=9$. ಇದೇ ರೀತಿಯಲ್ಲಿ ಜಾತಕದ ಇತರ ರಾಶಿ ದಶೆ ಗಳನ್ನು ಹೀಗೆ ಪಟ್ಟಿ ಮಾಡಬಹುದು :

| ದಶೆ | ವರ್ಷಗಳು |
|---|---|
| ಕುಂಭ | 9–0–0 |
| ಮೀನ | 4–0–0 |
| ಮೇಷ | 4–0–0 |
| ವೃಷಭ | 3–0–0 |
| ಮಿಥುನ | 2–0–0 |
| ಕಟಕ | 3–0–0 |
| ಸಿಂಹ | 1–0–0 |
| ಕನ್ಯಾ | 1–0–0 |
| ತುಲಾ | 10–0–0 |
| ವೃಶ್ಚಿಕ | 9–0–0 |
| ಧನುಸ್ | 11–0–0 |
| ಮಕರ | 8–0–0 |

## 86. ಚರದಶೆಯಲ್ಲಿ ಭುಕ್ತಿಗಳು

ರಾಶಿದಶೆಯಿಂದ ಬರುವ ಉಪಾವಧಿಗಳ ಅನುಕ್ರಮದ ನಿಷ್ಕರ್ಷೆಯು, ಮೊದಲ ರಾಶಿದಶೆಯಿಂದ ನಡೆಯುವ ಇತರೇ ದಶೆಗಳ ಅನುಕ್ರಮ ನಿಷ್ಕರ್ಷಿಸು ವುದಕ್ಕೆ ಅವಲಂಬಿಸುವ ತತ್ವವನ್ನೇ ಆಧರಿಸಿದೆ. ರಾಶಿಯಿಂದ ಒಂಬತ್ತನೆಯ ದಶೆಗೆ ಉಪಾವಧಿಗಳನ್ನು ಕಂಡುಹಿಡಿಯಬೇಕಾದಾಗ, ಆ ಒಂಬತ್ತನೆಯ ದಶೆಯು ಸವ್ಯ ಗುಂಪಿಗೆ ಸೇರಿದ್ದಾದರೆ, ಆ ರಾಶಿಗೆ ಸಲ್ಲುವ ಉಪದಶೆಗಳು ನೇರವಾದ ಕ್ರಮದಲ್ಲಿ, ದಶಾರಾಶಿಯಿಂದ ಎರಡನೇ ರಾಶಿಯ ಪ್ರಥಮ ಉಪ ದಶೆಯಿಂದ ಮೊದಲುಗೊಂಡು ಸಾಗುತ್ತವೆ. ಒಂಬತ್ತನೆಯದು ಅಪಸವ್ಯ ಗುಂಪಿಗೆ ಸೇರಿದ್ದಾದರೆ, ಅಗ್ಗ ಭುಕ್ತಿಗಳು ಹಿಮ್ಮುಖವಾಗಿ ಒದಗುತ್ತವೆ. ಮೊದಲನೆಯ ಭುಕ್ತಿಯು ಸಂಬಂಧಪಟ್ಟ ದಶಾರಾಶಿಯಿಂದ (ಹಿಮ್ಮುಖ ಕ್ರಮದಲ್ಲಿ) ಎರಡನೆಯ ರಾಶಿಯದಾಗುತ್ತದೆ. ವೃಷಭದಶೆಯಲ್ಲಿ ಭುಕ್ತಿಗಳು ಬೇಕಾಗಿವೆ ಅನ್ನೋಣ. ವೃಷಭದಿಂದ ಒಂಬತ್ತನೆಯದಾದ ಮಕರವು ಅಪಸವ್ಯ ಗುಂಪಿನದು. ಪರಿಣಾಮವಾಗಿ ವೃಷಭದಿಂದ ಹಿಮ್ಮುಖ ರೀತಿಯಲ್ಲಿ ಎರಡನೆಯ ದಾದ ಮೇಷದ್ದೇ ಮೊದಲ ಭುಕ್ತಿಯಾಗುತ್ತದೆ. ಎರಡನೆಯ, ಮೂರನೆಯ ಭುಕ್ತಿಗಳು ಕ್ರಮವಾಗಿ ಮೀನ, ಕುಂಭಗಳಾಗುತ್ತವೆ. ಕಡೆಯದು ವೃಷಭದ್ದೆ. ಮೇಷ ರಾಶಿದಶೆಯಿಂದ ಭುಕ್ತಿಗಳು ಬೇಕಾಗಿವೆ ಎಂದಿಟ್ಟುಕೊಳ್ಳಿ. ಮೇಷದಿಂದ ಒಂಬತ್ತನೆಯದು ಸವ್ಯ ಗುಂಪಿಗೆ ಸೇರಿದ್ದು. ಆದ್ದರಿಂದ ಅನುಕ್ರಮವು ನೇರ ವಾದದ್ದು. ಮೊದಲನೆಯ ಭುಕ್ತಿಯು ಮೇಷದಿಂದ (ನೇರವಾಗಿ) ಎರಡನೆಯ ದಾದ ವೃಷಭದ್ದಾಗುತ್ತದೆ. ಕಡೆಯ ಭುಕ್ತಿ ಮೇಷದ್ದೆ.

## 87. ಭುಕ್ತಿಗಳ ಅವಧಿಗಳು

ದಶೆಗಳು ಹನ್ನೆರಡಾದುದರಿಂದ, ದಶೆಯ ಹನ್ನೆರಡನೇ ಒಂದು ಭಾಗವು ಭುಕ್ತಿಯ ಅವಧಿಯಾಗುತ್ತದೆ. ಈ ರೀತಿಯಲ್ಲಿ ಮಾದರಿ ಜಾತಕದಲ್ಲಿ, ವೃಷಭದ ದಶಾವಧಿಯು ಏಳು ವರ್ಷವಾಗಿದ್ದು, ಪ್ರತಿ ಭುಕ್ತಿಗೂ ಏಳು ತಿಂಗಳ ಕಾಲ ಸಲ್ಲುತ್ತದೆ.

ಇಪ್ಪತ್ತೊಂದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ವೃಷಭ ಮೇಷಗಳ ಚರದಶೆಯಲ್ಲಿ ಭುಕ್ತಿಗಳ ಅನುಕ್ರಮವನ್ನು ಕಂಡುಹಿಡಿಯಿರಿ.**

ವೃಷಭದಿಂದ ನವಮವು ಅಪಸವ್ಯ ಗುಂಪಿನದಾಗುವುದರಿಂದ ಭುಕ್ತಿಗಳ ಅನುಕ್ರಮವು ತಿರುಗುಮುರುಗಾಗುತ್ತದೆ. ಮೊದಲ ಭುಕ್ತಿಯು ವೃಷಭ

ದಿಂದ ಹಿಮ್ಮುಖವಾಗಿ ಎರಡನೇಯದಾದ ಮೇಷವಾಗುತ್ತದೆ. ವೃಷಭ ರಾಶಿ ಯಲ್ಲಿನ ಭುಕ್ತಿಗಳು ಮುಂದೆ ತೋರಿಸಿರುವಂತಿವೆ :

| ದಶೆ | ಭುಕ್ತಿ | ವರ್ಷ | ತಿಂಗಳು | ದಿವಸಗಳು |
|---|---|---|---|---|
| ವೃಷಭ | ಮೇಷ | 0 | 7 | 0 |
| " | ಮೀನ | 0 | 7 | 0 |
| " | ಕುಂಭ | 0 | 7 | 0 |
| " | ಮಕರ | 0 | 7 | 0 |
| " | ಧನುಸ್ | 0 | 7 | 0 |
| " | ವೃಶ್ಚಿಕ | 0 | 7 | 0 |
| " | ತುಲಾ | 0 | 7 | 0 |
| " | ಕನ್ಯಾ | 0 | 7 | 0 |
| " | ಸಿಂಹ | 0 | 7 | 0 |
| " | ಕಟಕ | 0 | 7 | 0 |
| " | ಮಿಥುನ | 0 | 7 | 0 |
| " | ವೃಷಭ | 0 | 7 | 0 |
| | | 7 | 0 | 0 |

ಮುಂದಿನ ದಶೆಯನ್ನು ತೆಗೆದುಕೊಂಡಲ್ಲಿ, ಮೇಷದಿಂದ ನವಮವು ಸವ್ಯ **ಗುಂಪಿಗೆ** ಸೇರಿದ್ದು. ಆದಕಾರಣ ಭುಕ್ತಿಗಳ ಅನುಕ್ರಮ ನೇರವಾದದ್ದು. ಮೊದಲನೆಯ ಭುಕ್ತಿ ಮೇಷದಿಂದ ಎರಡನೆಯದಾದ ವೃಷಭ. ಪ್ರತಿ ಭುಕ್ತಿಯ ಅವಧಿಯು ಮೇಷ ರಾಶಿ ದಶೆಯ 6 ವರ್ಷಗಳ ಹನ್ನೆರಡನೆಯ ಒಂದು ಭಾಗ ವಾದ 6 ತಿಂಗಳು. ಮೇಷ ರಾಶಿ ದಶೆಯ ಭುಕ್ತಿ ಅವಧಿಗಳು ಹೀಗೆ ನಡೆಯುತ್ತವೆ :

| ದಶೆ | ಭುಕ್ತಿ | ವರ್ಷ | ತಿಂಗಳು | ದಿವಸಗಳು |
|---|---|---|---|---|
| ಮೇಷ | ವೃಷಭ | 0 | 6 | 0 |
| " | ಮಿಥುನ | 0 | 6 | 0 |
| " | ಕಟಕ | 0 | 6 | 0 |
| " | ಸಿಂಹ | 0 | 6 | 0 |
| " | ಕನ್ಯಾ | 0 | 6 | 0 |
| | ತುಲಾ | 0 | 6 | 0 |
| " | ವೃಶ್ಚಿಕ | 0 | 6 | 0 |
| " | ಧನುಸ್ | 0 | 6 | 0 |
| " | ಮಕರ | 0 | 6 | 0 |
| " | ಕುಂಭ | 0 | 6 | 0 |
| " | ಮೀನ | 0 | 6 | 0 |
| " | ಮೇಷ | 0 | 6 | 0 |
| | | 6 | 0 | 0 |

## 88. ಸ್ಥಿರದಶೆ

ಹೆಸರೇ ಸೂಚಿಸುವಂತೆ, ಸ್ಥಿರದಶೆಯ ಅವಧಿಗಳು ನಿಯತ ಬದಲಾವಣೆ ಆಗುವುದಿಲ್ಲ. ಸ್ಥಿರದಶೆಯು ಮಾರಕ ಕಾಲವನ್ನು ಕಂಡುಹಿಡಿಯಲು ತುಂಬ ಮುಖ್ಯವೆಂದು ಭಾವಿಸಲಾಗಿದೆ.

## 89. ದಶಾವಧಿಗಳು

ಸ್ಥಿರದಶಾ ಗಣನೆತಕ್ಕೆ, ಭಚಕ್ರದ 12 ರಾಶಿಗಳನ್ನು ಚರ ಸ್ಥಿರ ದ್ವಿಸ್ವಭಾವ ಎಂದು ಮೂರಾಗಿ ವಿಂಗಡಿಸಿದೆ. ಚರರಾಶಿಯ ಸ್ಥಿರರಾಶಿಯ ಮತ್ತು ದ್ವಿಸ್ವಭಾವ ರಾಶಿಯ ಸ್ಥಿರದಶಾ ಅವಧಿಗಳನ್ನು ಕ್ರಮವಾಗಿ 7, 8 ಮತ್ತು 9 ವರ್ಷಗಳಾಗಿ ಖಚಿತಪಡಿಸಿದೆ. ಮುಂದಿನ ಪಟ್ಟಿಯು ಸ್ವಯಂಸ್ಪಷ್ಟವಾಗಿದೆ :—

| ರಾಶಿ | ಸ್ಥಿರದಶಾವಧಿ |
|---|---|
| ಮೇಷ | 7 ವರ್ಷಗಳು |
| ವೃಷಭ | 8 " |
| ಮಿಥುನ | 9 " |
| ಕಟಕ | 7 " |
| ಸಿಂಹ | 8 " |
| ಕನ್ಯಾ | 9 " |
| ತುಲಾ | 7 " |
| ವೃಶ್ಚಿಕ | 8 " |
| ಧನುಸ್ | 9 " |
| ಮಕರ | 7 " |
| ಕುಂಭ | 8 " |
| ಮೀನ | 9 " |
| ಮೊತ್ತ | 96 " |

## 90. ಸ್ಥಿರದಶಾ ಗುಣಿತ

ದಶಾ ಪ್ರಾರಂಭದ ಬಗೆಗೆ ಎರಡು ಅಭಿಪ್ರಾಯಗಳಿವೆ. ಒಂದು ಅಭಿಪ್ರಾಯದ ಪ್ರಕಾರ ಸ್ಥಿರದಶೆಯು ಲಗ್ನ ಸಪ್ತಮಗಳಲ್ಲಿ ಯಾವುದು ಪ್ರಬಲವೋ ಅದರಿಂದ ಪ್ರಾರಂಭವಾಗುತ್ತದೆ. ಈ ಅಭಿಪ್ರಾಯವನ್ನು ಪರಾಶರ ಸಮರ್ಥಿಸುವುದಿಲ್ಲ. ಜೈಮಿನಿಯಾದರೋ ನಾಲ್ಕನೆಯ ಸೂತ್ರದಲ್ಲಿ* (ಅಧ್ಯಾಯ 2, ಪಾದ 2) ಸ್ಥಿರದಶೆಯು ಬ್ರಹ್ಮ ಇರುವ ರಾಶಿಯಿಂದ (ಅಂಕ 35 ನೋಡಿ) ಪ್ರಾರಂಭವಾಗುತ್ತದೆ ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಇದನ್ನು ಪರಾಶರ ಖಚಿತವಾಗಿ ಸಮರ್ಥಿಸುತ್ತಾನೆ. ಆದಕಾರಣ ಸ್ಥಿರದಶೆಯು ಬ್ರಹ್ಮನಿರುವ ರಾಶಿಯಿಂದ ಪ್ರಾರಂಭವಾಗಿ ಕ್ರಮವಾಗಿ ಸಾಗುತ್ತದೆ. ಸ್ಥಿರ ದಶಾ ಶೇಷವನ್ನು ಬ್ರಹ್ಮಗ್ರಹದ ಸ್ಪಷ್ಟದಿಂದ ಕಂಡುಹಿಡಿಯಬೇಕೆಂದು ಕೆಲವು ಮಂದಿ ಪಂಡಿತರು ಪ್ರತಿಪಾದಿಸುವ ವಾದಕ್ಕೆ ವ್ಯಾಖ್ಯಾನಕಾರರ ಅನುಮತಿ ದೊರೆತಂತೆ ಕಾಣುವುದಿಲ್ಲ. ಪ್ರಾರಂಭದ ದಶಾರಾಶಿಯು

* ಬ್ರಹ್ಮಾದಿರೇವ

ಬೆಸನಾಗಿದ್ದರೆ ದಶಾನುಕ್ರಮವು ನೇರವಾಗಿರುತ್ತದೆಂದು ಕೆಲವರು ಹೇಳುತ್ತಾರೆ. ಸಮವಾಗಿದ್ದರೆ, ಅನುಕ್ರಮವು ಹಿಮ್ಮುಖವಾಗುತ್ತದೆ.

ಇಪ್ಪತ್ತೆರಡನೆಯ ಉದಾಹರಣೆ : **ಮೂದರಿ ಜಾತಕದಲ್ಲಿ ಸ್ಥಿರದಶೆಯ ಅವಧಿಗಳನ್ನು ಕಂಡುಹಿಡಿಯಿರಿ.**

ಬ್ರಹ್ಮಗ್ರಹವಾದ ಗುರು ಕುಂಭದಲ್ಲಿರುವ ಕಾರಣ, ಮೊದಲ ದಶೆಯು ಅಲ್ಲಿಂದಲೇ ಪ್ರಾರಂಭವಾಗುತ್ತದೆ. ಅದರ ಅವಧಿ 8 ವರ್ಷಗಳು. ಮುಂದಿನ ದಶೆಗಳು ಕ್ರಮವಾಗಿ ಮೀನ ಮೇಷ ಇತ್ಯಾದಿ ಆಗುತ್ತವೆ. ಹೀಗೆ :

| ರಾಶಿ | | ವರ್ಷಗಳು |
|---|---|---|
| ಮೊದಲ ದಶೆಯು | ಕುಂಭ | 8 0 0 |
| | ಮೀನ | 9 0 0 |
| | ಮೇಷ | 7 0 0 |
| | ವೃಷಭ | 8 0 0 |
| | ಮಿಥುನ | 9 0 0 |
| | ಕಟಕ | 7 0 0 |
| | ಸಿಂಹ | 8 0 0 |
| | ಕನ್ಯಾ | 9 0 0 |
| | ತುಲಾ | 7 0 0 |
| | ವೃಶ್ಚಿಕ | 8 0 0 |
| | ಧನುಸ್ | 9 0 0 |
| | ಮಕರ | 7 0 0 |
| | | 96.00 |

## 91. ತ್ರಿಕೋಣ ದಶೆ

ಲಗ್ನ ಪಂಚಮ ನವಮಗಳ ಈ ಪೈಕಿ ಯಾವುದು ಅತ್ಯಂತ ಪ್ರಬಲ ಎಂದು ಕಂಡುಹಿಡಿಯಿರಿ. ಅಲ್ಲಿಂದ ಮೊದಲ ದಶೆ ಪ್ರಾರಂಭವಾಗುತ್ತದೆ. ದಶಾನುಕ್ರಮ ಪ್ರಾರಂಭ ರಾಶಿಯು ಸವ್ಯವಾದರೆ ನೇರ, ಅಪಸವ್ಯವಾದರೆ

ಹಿಮ್ಮುಖ. ಮೊದಲನೆಯ ದಶಾರಾಶಿಯು ಸವ್ಯಕ್ಕೆ ಸೇರಿದ್ದರೆ, ತರುವಾಯ ಬರುವ ದಶೆಗಳು ನೇರಕ್ರಮದಲ್ಲಿ ಮುಂದೆ ಸೂಚಿಸಿರುವಂತೆ ನಡೆಯುತ್ತವೆ :

| 2ನೇಯ | ದಶೆ | ಮೊದಲನೆಯದರಿಂದ ಐದು |
|---|---|---|
| 3 | " | ಒಂಬತ್ತನೆಯದು |
| 4 | " | ಎರಡನೆಯದು |
| 5 | " | ಆರನೆಯದು |
| 6 | " | ಹತ್ತನೆಯದು |
| 7 | " | ಮೂರನೆಯದು |
| 8 | " | ಏಳನೆಯದು |
| 9 | " | ಹನ್ನೊಂದನೆಯದು |
| 10 | " | ನಾಲ್ಕನೆಯದು |
| 11 | " | ಎಂಟನೆಯದು |
| 12 | " | ಹನ್ನೆರಡನೆಯದು |

ಮೊದಲನೆಯ ದಶೆಯು ಮಿಥುನದಿಂದ ಪ್ರಾರಂಭವಾಗುತ್ತದೆ ಅನ್ನಿ. ಎರಡನೆಯ ದಶೆಯು ಎರಡನೆಯ ತ್ರಿಕೋಣ, ಅಂದರೆ ಪಂಚಮದ್ದು. ಮೂರನೆಯ ದಶೆಯು ಕುಂಭ (ನವಮದ್ದು), ನಾಲ್ಕನೆಯದು ಕರ್ಕಾಟಕ (ದ್ವಿತೀಯದ್ದು), ಈ ರೀತಿ.

ಮೊದಲನೆಯ ರಾಶಿಯು ಅಪಸವ್ಯಕ್ಕೆ ಸಂದರೆ, ಉಳಿದ ದಶೆಗಳು ಮೇಲೆ ಹೇಳಿರುವಂತೆ ಹಿಮ್ಮುಖವಾಗಿ ಸಾಗುತ್ತವೆ. ಮೊದಲನೆಯ ದಶೆಯು ಕರ್ಕಾಟಕದ್ದಾದರೆ, ಎರಡನೆಯ ದಶೆಯು ಅದರಿಂದ ಪಂಚಮದ್ದಾಗುತ್ತದೆ (ಗಡಿಯಾರಕ್ಕೆ ಪ್ರತಿಯಾಗಿ) ಅಂದರೆ ಮೀನದ್ದು. ಮೂರನೆಯ ದಶೆಯು ನವಮದ್ದಾದ ವೃಶ್ಚಿಕದ್ದಾಗುತ್ತದೆ. ನಾಲ್ಕನೆಯದು ದ್ವಿತೀಯದ್ದಾದ ಮಿಥುನದ್ದಾಗುತ್ತದೆ, ಇತ್ಯಾದಿ.

## 92. ತ್ರಿಕೋಣದಶೆಯ ಅವಧಿ

ಚರ ದಶಾವಧಿಯನ್ನು ಕಂಡುಹಿಡಿಯಲು ಅವಲಂಬಿಸಿದ ವಿಧಾನವನ್ನೇ ತ್ರಿಕೋಣ ದಶಾ ಕಾಲವನ್ನು ಕಂಡುಹಿಡಿಯಲೂ ಅವಲಂಬಿಸಬೇಕು. ಅಂದರೆ ಕುರಿತ ರಾಶಿಗೂ ಆ ರಾಶ್ಯಾಧಿಪತಿಗೂ ಇರುವ ಅಂತರದ ರಾಶಿಗಳನ್ನು (ಆ ರಾಶಿಯು ಸವ್ಯವಾದರೆ ನೇರವಾಗಿಯೂ ಅಪಸವ್ಯವಾದರೆ ಹಿಮ್ಮುಖ

ವಾಗಿಯೂ) ಎಣಿಸಬೇಕು. ಕರ್ಕಾಟಕದ ದಶಾವಧಿ ಬೇಕಾಗಿದೆ ಅನ್ನಿ. ಅದರ ಅಧಿಪತಿ ಚಂದ್ರ ಸಿಂಹದಲ್ಲಿದ್ದಾನೆ. ಕರ್ಕಾಟಕ ಅಪಸವ್ಯ ರಾಶಿ. ಪರಿಣಾಮ ವಾಗಿ, ಎಣಿಕೆಯು ಅಪಸವ್ಯ (ಗಡಿಯಾರಕ್ಕೆ ಪ್ರತಿಕ್ರಮ) ವಾಗಿರಬೇಕು. ಚಂದ್ರ 12ರಲ್ಲಿದ್ದಾನೆ (ನ). ಆದಕಾರಣ ದಶಾವಧಿಯು ಹನ್ನೊಂದು ವರ್ಷಗಳು (ನ – 1 = 11).

ಇಪ್ಪತ್ತಮೂರನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ತ್ರಿಕೋಣ ದಶೆಗಳ ಅನುಕ್ರಮವನ್ನೂ ಅವಧಿಗಳನ್ನೂ ಕಂಡುಹಿಡಿಯಿರಿ.**

ಲಗ್ನ ಪಂಚಮ ನವಮ ಈ ಪೈಕಿ ಪಂಚಮವೇ ಅತ್ಯಂತ ಪ್ರಬಲ ರಾಶಿ, ಅದರ ಅಂಕಿ ಬಲ 157.5 ಘಟಿಕಗಳು (18ನೆಯ ಉದಾಹರಣೆ). ಆದ ಕಾರಣ ಮೊದಲನೆಯ ತ್ರಿಕೋಣದಶೆಯು ಕನ್ಯಾದಿಂದ ಪ್ರಾರಂಭವಾಗಬೇಕು. ಕನ್ಯಾ ಅಪಸವ್ಯ ರಾಶಿ, ದಶಾನುಕ್ರಮವು ಹಿಮ್ಮುಖ. ಚರದಶೆಯ ಅವಧಿ ಗಳಂತೆಯೇ ಈ ದಶಾವಧಿಗಳೂ ಕೂಡ. ಎರಡಕ್ಕೂ ಆಧಾರವಾದ ತತ್ತ್ವ ಒಂದೇ. ಮೊದಲನೆಯ ದಶೆ ಕನ್ಯೆಯದು, ಎರಡನೆಯದು ವೃಷಭದ್ದು (ಪ್ರಥಮದಿಂದ ಹಿಮ್ಮುಖವಾಗಿ ಪಂಚಮ), ಮೂರನೆಯದು ಮಕರದ್ದು (ನವಮ), ನಾಲ್ಕನೆಯದು ಸಿಂಹದ್ದು (ದ್ವಿತೀಯ). ಹೀಗೆ ಎಣಿಸಿದರೆ, ದಶೆ ಗಳನ್ನು ಮುಂದೆ ಸೂಚಿಸಿರುವಂತೆ ಪಟ್ಟಿಮಾಡಬಹುದು :

**ಮಾದರಿ ಜಾತಕದಲ್ಲಿರುವ ತ್ರಿಕೋಣ ದಶೆಗಳು**

| ರಾಶಿ | ವರ್ಷಗಳು |
|---|---|
| ಕನ್ಯಾ | 7 0 0 |
| ವೃಷಭ | 7 0 0 |
| ಮಕರ | 7 0 0 |
| ಸಿಂಹ | 6 0 0 |
| ಮೇಷ | 6 0 0 |
| ಧನುಸ್ | 2 0 0 |
| ಕಟಕ | 3 0 0 |
| ಮೀನ | 1 0 0 |
| ವೃಶ್ಚಿಕ | 11 0 0 |
| ಮಿಥುನ | 8 0 0 |
| ಕುಂಭ | 10 0 0 |
| ತುಲಾ | 2 0 0 |

## 93. ತ್ರಿಕೋಣದಶೆಯ ಭುಕ್ತಿಗಳು

ಭುಕ್ತಿಯ ಅವಧಿಯು ದಶಾವಧಿಯ ಹನ್ನೆರಡನೆಯ ಒಂದು ಭಾಗ. ದಶೆಗಳ ಅನುಕ್ರಮದಂತೆಯೇ ಭುಕ್ತಿಗಳ ಅನುಕ್ರಮ ಕೂಡ. ಯಾವ ರಾಶಿಗೆ ಭುಕ್ತಿ ಅವಧಿಗಳು ಬೇಕೋ ಅದು ಸವ್ಯಕ್ಕೆ ಸೇರಿದ್ದರೆ, ಭುಕ್ತಿಗಳೂ ನೇರ ಕ್ರಮದಲ್ಲಿ ಸಾಗುತ್ತವೆ. ಮೊದಲನೆಯದು ದಶಾರಾಶಿ, ಎರಡನೆಯದು ಪಂಚಮರಾಶಿ, ಮೂರನೆಯದು ನವಮರಾಶಿ, ನಾಲ್ಕನೆಯದು ದ್ವಿತೀಯ ರಾಶಿ ಹೀಗೆ ಗಡಿಯಾರದ ನೇರಕ್ಕೆ. ಭುಕ್ತಿ ಅವಧಿಗಳು ಯಾವ ರಾಶಿಗೆ ಬೇಕೋ ಅದು ಅಪಸವ್ಯವಾದರೆ, ಮೇಲಿನ ಕ್ರಮದಲ್ಲೇ ಹಿಮ್ಮುಖವಾಗಿ ಎಣಿಸಬೇಕು. ಕರ್ಕಾಟಕವನ್ನು ತೆಗೆದುಕೊಳ್ಳಿ. ಇದು ಅಪಸವ್ಯ ಗುಂಪಿನದು. ಮೊದಲನೆಯ ಭುಕ್ತಿ ಕರ್ಕಾಟಕದ್ದು. ಎರಡನೆಯದು ಪಂಚಮದ್ದು (ಹಿಮ್ಮುಖವಾಗಿ), ಅಂದರೆ ಮೀನದ್ದು. ಮೂರನೆಯ ಭುಕ್ತಿ ನವಮದ್ದು (ಹಿಮ್ಮುಖವಾಗಿ) ಅಂದರೆ ವೃಶ್ಚಿಕದ್ದು ಇತ್ಯಾದಿ.

ಇಪ್ಪತ್ತನಾಲ್ಕನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಧನುಸ್ಸು ಮತ್ತು ಮಕರ ತ್ರಿಕೋಣ ದಶೆಗಳನ್ನು ಕಂಡುಹಿಡಿಯಿರಿ.**

ಧನುಸ್ ಸವ್ಯದ ಗುಂಪಿಗೆ ಸೇರಿದ್ದು. ಆದಕಾರಣ. ಎಣಿಕೆಯು ನೇರ ಕ್ರಮದಲ್ಲಿ ನಡೆಯಬೇಕು. ಮೊದಲನೆಯ ಭುಕ್ತಿಯು ಧನುಸ್ಸಿನದು. ಎರಡನೆಯದು ಮೇಷದ್ದು (ಪ್ರಥಮದಿಂದ ಪಂಚಮ), ಮೂರನೆಯದು ಸಿಂಹದ್ದು ಇತ್ಯಾದಿ, ಹೀಗೆ :—

ಧನುಸ್ಸಿನ ಅವಧಿಯು ಎರಡು ವರ್ಷಗಳಾದ ಕಾರಣ ಪ್ರತಿ ಭುಕ್ತಿಯ ಅವಧಿಯೂ ಎರಡು ತಿಂಗಳು.

ಧನುಸ್ಸಿನ ತ್ರಿಕೋಣ ದಶೆಯಲ್ಲಿ ಭುಕ್ತಿಗಳ ಅವಧಿಗಳು :

| ದಶ | ಭುಕ್ತಿ | ವರ್ಷ | ತಿಂಗಳು | ದಿನಗಳು |
|---|---|---|---|---|
| ಧನುಸ್ | ಧನುಸ್ | 0 | 2 | 0 |
| ,, | ಮೇಷ | 0 | 2 | 0 |
| ,, | ಸಿಂಹ | 0 | 2 | 0 |
| ,, | ಮಕರ | 0 | 2 | 0 |
| ,, | ವೃಷಭ | 0 | 2 | 0 |

| ದಶೆ | ಭುಕ್ತಿ | ಭುಕ್ತಿ ವರ್ಷ | ತಿಂಗಳು | ದಿನಗಳು |
|---|---|---|---|---|
| " | ಕನ್ಯಾ | 0 | 2 | 0 |
| " | ಮಿಥುನ | 0 | 2 | 0 |
| " | ಕುಂಭ | 0 | 2 | 0 |
| " | ತುಲಾ | 0 | 2 | 0 |
| " | ಮೀನ | 0 | 2 | 0 |
| " | ಕಟಕ | 0 | 2 | 0 |
| " | ವೃಶ್ಚಿಕ | 0 | 2 | 0 |
| | ಮೊತ್ತ | 2 | 0 | 0 |

ಮಕರದ ತ್ರಿಕೋಣ ದಶಾವಧಿ 2 ವರ್ಷಗಳು. ಪ್ರತಿಯೊಂದು ಭುಕ್ತಿಯ ಅವಧಿಯೂ 7 ತಿಂಗಳು. ಮಕರವು ಅಪಸವ್ಯ ಗುಂಪಿಗೆ ಸೇರಿದ ಕಾರಣ, ಭುಕ್ತಿಗಳ ಅನುಕ್ರಮ ಹಿಮ್ಮುಖ. ಮೊದಲನೆಯ ಭುಕ್ತಿ ಮಕರದ್ದೆ. ಎರಡನೆಯದು ಕನ್ಯದ್ದು (ಮಕರದಿಂದ ಹಿಮ್ಮುಖವಾಗಿ ಪಂಚಮ), ಮೂರನೆಯದು ವೃಷಭದ್ದು. ಇತ್ಯಾದಿಯಾಗಿ ಹೀಗೆ :

ಮಕರದ ತ್ರಿಕೋಣ ದಶೆಯ ಭುಕ್ತಿಗಳ ಅವಧಿಗಳು :

| ದಶೆ | ಭುಕ್ತಿ | ವರ್ಷ | ತಿಂಗಳು | ದಿನಗಳು |
|---|---|---|---|---|
| ಮಕರ | ಮಕರ | 0 | 7 | 0 |
| " | ಕನ್ಯಾ | 0 | 7 | 0 |
| " | ವೃಷಭ | 0 | 7 | 0 |
| " | ಧನುಸ್ | 0 | 7 | 0 |
| " | ಮೇಷ | 0 | 7 | 0 |
| " | ಸಿಂಹ | 0 | 7 | 0 |
| " | ವೃಶ್ಚಿಕ | 0 | 7 | 0 |
| " | ಕಟಕ | 0 | 7 | 0 |
| " | ಮೀನ | 0 | 7 | 0 |
| " | ತುಲಾ | 0 | 7 | 0 |
| " | ಮಿಥುನ | 0 | 7 | 0 |
| | ಕುಂಭ | 0 | 7 | 0 |
| | ಮೊತ್ತ | 7 | 0 | 0 |

## 94. ವರ್ಣದ ದಶೆ

ಇದು ಜನ್ಮಲಗ್ನಕ್ಕೂ ವರ್ಣದ ಲಗ್ನಕ್ಕೂ ಇರುವ ಸಂಬಂಧವನ್ನು ಆಧರಿಸಿದ್ದು. ವರ್ಣದ ಲಗ್ನವನ್ನು ಹೇಗೆ ಗುಣಿಸುವುದು ಎಂಬುದನ್ನು ಅಂಕ 22ರಲ್ಲಿ ನಾವು ಈಗಾಗಲೇ ತಿಳಿಸಿದ್ದೇವೆ. ಅದೇ ರೀತಿಯಲ್ಲಿ ದ್ವಿತೀಯ ತೃತೀಯ ಮುಂತಾದ ಭಾವಗಳಿಗೆ ವರ್ಣದ ಲಗ್ನಗಳನ್ನು ಗುಣಿಸಬೇಕು. ಲಗ್ನವು ಬೆಸನಾದರೆ ದಶಾಕ್ರಮವು ನೇರವಾಗಿರುತ್ತದೆ. ಸಮವಾದರೆ ಹಿಮ್ಮುಖ ವಾಗುತ್ತದೆ. ವರ್ಣದ ದಶೆಯನ್ನು ಪ್ರಾರಂಭಿಸುವ ಮತ್ತು ಎಣಿಸುವ ವಿಚಾರ ವಾಗಿ ವಿವಿಧ ವ್ಯಾಖ್ಯಾನಕಾರರು ವಿವಿಧಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಪುಸ್ತಕವು ಜ್ಯೋತಿಷದ ಅಭ್ಯಾಸಿಗಳಿಗೆ ಮುಖ್ಯವಾಗಿ ಉದ್ದಿಷ್ಟವಾಗಿರುವುದ ರಿಂದ ಈ ವಿವಾದಕ್ಕೆ ಕೈಹಾಕುವುದಿಲ್ಲ.

ಕೆಲವರ ಪ್ರಕಾರ, ಈ ದಶೆಯು ಲಗ್ನ ಹೋರಾ ಲಗ್ನಗಳಲ್ಲಿ ಯಾವುದು ಪ್ರಬಲವೋ ಅದರಿಂದ ಪ್ರಾರಂಭವಾಗಬೇಕು. ನಾಲ್ಕನೆಯ ಅಧ್ಯಾಯ, ಮೂರನೆಯ ಪಾದ, ಹದಿನಾರನೆಯ ಸೂತ್ರದಲ್ಲಿ ಇದಕ್ಕೆ ಸುಳಿವು ನನಗೆ ಕಾಣಿ ಸುತ್ತದೆ. ಅದರಲ್ಲಿ ಜೈಮಿನಿಯು, ಲಗ್ನವು ಬೆಸರಾಶಿಯಾದರೆ ವರ್ಣದ ದಶೆಯು ಲಗ್ನದಿಂದ ಪ್ರಾರಂಭವಾಗಿ ನೇರಕ್ರಮದಲ್ಲಿ ಸಾಗಬೇಕೆಂದೂ, ಲಗ್ನವು ಸಮನಾದರೆ ವಿರುದ್ಧ ಕ್ರಮದಲ್ಲಿ ಸಾಗಬೇಕೆಂದೂ ಸೂಚಿಸುತ್ತಾನೆ. ಲಗ್ನವು ಬೆಸವೋ ಸಮವೋ ಅದರ ಪ್ರಕಾರ ದಶೆಯು ನೇರ ಕ್ರಮದಲ್ಲೋ ವಿರುದ್ಧ ಕ್ರಮದಲ್ಲೋ ಸಾಗಬೇಕು. ಲಗ್ನವು ಮೇಷವಾಗಿ ವರ್ಣದ ಲಗ್ನವು ಕನ್ಯೆಯಾದರೆ, ಆಗ್ಗೆ ಮೊದಲನೆಯ ವರ್ಣದ ದಶೆ ಮೇಷದ್ದು, ಅದರ ಅವಧಿ 6 ವರ್ಷಗಳು, ಲಗ್ನದಿಂದ ವರ್ಣದ ಲಗ್ನದವರೆಗೆ ಸವ್ಯ (ಗಡಿಯಾರದ) ಕ್ರಮದಲ್ಲಿ ಎಣಿಕೆ ಮಾಡಬೇಕು. ಇದಕ್ಕೆ ಪ್ರತಿಯಾಗಿ ಲಗ್ನವು ವೃಷಭವಾಗಿ ವರ್ಣದ ಲಗ್ನವು ಕನ್ಯೆಯಾದರೆ, ಆಗ ಮೊದಲನೆಯ ವರ್ಣದಶೆಯು ಮೇಷದ್ದಾಗುತ್ತದೆ. ಅದರ ಅವಧಿ 8 ವರ್ಷಗಳು, ಲಗ್ನ ದ್ವಾದಶದಿಂದ ವರ್ಣದವರೆಗೆ ಹಿಮ್ಮುಖವಾಗಿ ಎಣಿಸಬೇಕು. ಲಗ್ನವು ಬೆಸವಾದರೆ, ಆಗ ಎರಡನೆಯ ವರ್ಣದ ದಶೆಯು ಎರಡನೆಯ ರಾಶಿಯ ದಾಗುತ್ತದೆ, ಅದರ ಅವಧಿ ಲಗ್ನಕ್ಕೂ ಎರಡನೆಯ ವರ್ಣದ ದಶೆಯು ಇರುವ ನೇರವಾದ ಅಂತರಕ್ಕೆ ಸಮವಾಗುತ್ತದೆ. ಲಗ್ನವು ಸಮವಾದರೆ ಎರಡನೆಯ ದಶೆಯು ಲಗ್ನದಿಂದ ತೃತೀಯದ್ದಾಗುತ್ತದೆ ಅಥವಾ ದ್ವಾದಶ

ದಿಂದ (ಗಡಿಯಾರಕ್ಕೆ ವಿರೋಧವಾಗಿ) ದ್ವಿತೀಯ ರಾಶಿಯಾಗುತ್ತದೆ. ಅವಧಿಯು ಲಗ್ನಕ್ಕೂ ಎರಡನೆಯ ವರ್ಣದಕ್ಕೂ ಹಿಮ್ಮುಖ ಎಣಿಕೆಯಲ್ಲಾಗುವ ರಾಶಿಗಳಿಗೆ ಸಮವಾಗುತ್ತದೆ.

ಸಂಕ್ಷೇಪವಾಗಿ, ಲಗ್ನವು ಬೆಸವಾದರೆ ದಶಾನುಕ್ರಮವು ನೇರ. ವರ್ಣದ ದಶೆಯು ಅವಧಿಯು ಲಗ್ನವು ಬೆಸವಾದಾಗ ಲಗ್ನಕ್ಕೂ ವರ್ಣದ ಲಗ್ನಕ್ಕೂ ಇರುವ ಅಂತರಕ್ಕೆ(ನೇರವಾದ ಎಣಿಕೆ) ಸಮವಾಗುತ್ತದೆ. ಲಗ್ನವು ಸಮವಾದರೆ, ಅನುಕ್ರಮ ಹಿಮ್ಮುಖವಾಗುತ್ತದೆ ಮತ್ತು ವರ್ಣದ ದಶೆಯ ಅವಧಿಯು ಲಗ್ನಕ್ಕೆ ದ್ವಾದಶದಿಂದ ಕುರಿತುಕೊಂಡ ಲಗ್ನದ ದಶೆಗೆ ಹಿಮ್ಮುಖವಾದ ಎಣಿಕೆ ಯಂತೆ ಇರುವ ಅಂತರಕ್ಕೆ ಸಮವಾಗುತ್ತದೆ.

ಇಪ್ಪತ್ತೈದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಕೆಲವು ವರ್ಣದ ದಶೆಗಳನ್ನು ಗೊತ್ತುಹಚ್ಚಿ.**

ಐದನೆಯ ಉದಾಹರಣೆಯ ಪ್ರಕಾರ ವರ್ಣದ ಲಗ್ನವು ಧನುಸ್ ಮತ್ತು ಎರಡನೆಯ ವರ್ಣದ ಲಗ್ನವು ವೃಷಭ. ಜನ್ಮಲಗ್ನವು ಸಮವಾದ ಕಾರಣ, ದಶಾಕ್ರಮವು ಹಿಮ್ಮುಖ. ದ್ವಾದಶವಾದ ಮೇಷದಿಂದ ಎಣಿಕೆ ಪ್ರಾರಂಭ. ಮೊದಲನೆಯ ವರ್ಣದ ದಶೆಯು ಮೇಷದ್ದು (ವೃಷಭದಿಂದ ದ್ವಾದಶ). ಜನ್ಮ ಲಗ್ನಕ್ಕೆ ದ್ವಾದಶದಿಂದ ವರ್ಣದ ಲಗ್ನದವರೆಗೆ (ಹಿಮ್ಮುಖ ವಾಗಿ) ಎಣಿಸಿದರೆ, ವರ್ಣದ ದಶೆಯ ಅವಧಿಯು 5 ಆಗುತ್ತದೆ. ಇದೇ ರೀತಿ ಯಲ್ಲಿ, ಎರಡನೆಯ ವರ್ಣದ ದಶೆಯು ಮೀನದ್ದು. ಎರಡನೆಯ ವರ್ಣದ ವೃಷಭ. ಜನ್ಮಲಗ್ನಕ್ಕೆ ದ್ವಾದಶದಿಂದ ಎರಡನೆಯ ವರ್ಣದ ಆದ ವೃಷಭದ ತನಕ ಎಣಿಸಿದರೆ ಮೀನ ವರ್ಣದಾವಧಿಯು 12 ಆಗುತ್ತದೆ.

∴ ಮೇಷ ವರ್ಣದ 5–0–0

ಮೀನ ವರ್ಣದ 12–0–0

## 95. ಬ್ರಹ್ಮದಶೆ

ಲಗ್ನವು ಬೆಸವಾದರೆ, ಆಗ ಬ್ರಹ್ಮರಾಶಿಯಿಂದ ದಶಾ ಪ್ರಾರಂಭ, ಅನುಕ್ರಮವು ನೇರ. ಲಗ್ನವು ಸಮವಾದರೆ ಬ್ರಹ್ಮರಾಶಿಯ ಸಪ್ತಮದಿಂದ ದಶಾರಂಭ, ಅನುಕ್ರಮ ಹಿಮ್ಮುಖ. ದಶಾವಧಿಯು, ದಶಾಕ್ರಮವು ನೇರ ವಾಗಲಿ ಹಿಮ್ಮುಖವಾಗಲಿ, ಕುರಿತ ರಾಶಿಗೂ ಮತ್ತು ಕುರಿತ ರಾಶಿಯಿಂದ

ಷಷ್ಠಾಧಿಪತಿ ಇರುವ ರಾಶಿಗೂ ಇರುವ ರಾಶಿ ಸಂಖ್ಯೆಗೆ ಸಮ. ಮೇಷವು ಲಗ್ನವಾಗಿ ಬ್ರಹ್ಮ ವೃಶ್ಚಿಕದಲ್ಲಿದ್ದಾಗ ಕುಜನು ಕನ್ಯಾದಲ್ಲಿದ್ದರೆ, ದಶಾನು ಕ್ರಮವು ಬ್ರಹ್ಮರಾಶಿಯಿಂದ ನೇರ—ಲಗ್ನವು ಬೆಸವಾಗಿರುವುದರಿಂದ ಪ್ರಾರಂಭ ದೆಶೆಯಾದ ವೃಶ್ಚಿಕದಿಂದ ಷಷ್ಠಾಧಿಪತಿಯು ವೃಶ್ಚಿಕದಿಂದ ಏಕಾದಶದಲ್ಲಿರುವ ಕಾರಣ, ವೃಶ್ಚಿಕ ದಶಾವಧಿಯು $11-1=10$ ವರ್ಷಗಳು.

ಸ್ಥಿರದಶೆಗೂ ವರ್ಣದ ದಶೆಗೂ ಇರುವ ವ್ಯತ್ಯಾಸವೇನೆಂದರೆ, ಸ್ಥಿರದಲ್ಲಿ ಅವಧಿಯು ನಿಶ್ಚಿತ; ಬ್ರಹ್ಮನಿಂದಲೇ ಪ್ರಾರಂಭ. ಬ್ರಹ್ಮದಶೆಯಲ್ಲಿ ದಶೆಯು ಬ್ರಹ್ಮನಿಂದಲೋ ಬ್ರಹ್ಮಕ್ಕೆ ಸಪ್ತಮದಿಂದಲೋ ಆರಂಭವಾದರೂ ದಶಾವಧಿಯು ಅನಿಶ್ಚಿತ.

ಇಪ್ಪತ್ತಾರನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಬ್ರಹ್ಮದಶೆಯನ್ನು ಕಂಡುಹಿಡಿಯಿರಿ.**

ಲಗ್ನವು ವೃಷಭ, ಸಮರಾಶಿ. ಬ್ರಹ್ಮ ಕುಂಭದಲ್ಲಿದ್ದಾನೆ. ಆದಕಾರಣ ಮೊದಲನೆಯ ಬ್ರಹ್ಮದಶೆಯು ಸಿಂಹದಿಂದ (ಬ್ರಹ್ಮನಿಗೆ ಸಪ್ತಮದಿಂದ) ಪ್ರಾರಂಭ. ದಶಾಕ್ರಮ ಗಡಿಯಾರಕ್ಕೆ ಪ್ರತಿಗತಿ ಅಂದರೆ ಸಿಂಹ, ಕಟಕ ಹೀಗೆ. ಸಿಂಹದಿಂದ, ಷಷ್ಠಾಧಿಪತಿಯಾದ ಶನಿಯು ಸಿಂಹದಿಂದ ಏಕದಶದಲ್ಲಿ ಇದ್ದಾನೆ. ಆದಕಾರಣ ಸಿಂಹದಶೆಯ ಅವಧಿಯು $(11-1)=10$ ವರ್ಷಗಳು. ಮುಂದಿನ ದಶಾರಾಶಿಯಿಂದ, ಷಷ್ಠಾಧಿಪತಿಯಾದ ಗುರು ಕರ್ಕಾಟಕದಿಂದ ಅಷ್ಟಮದಲ್ಲಿದ್ದಾನೆ. ಆದಕಾರಣ ಕರ್ಕಾಟಕ ದಶೆಯು 7 ವರ್ಷ ನಡೆಯುತ್ತದೆ. ಇದೇ ರೀತಿ ಇತರ ರಾಶಿಗಳಿಗೆ ಗುಣಿಸಿದರೆ, ವಿವಿಧ ಅವಧಿಗಳು ಹೀಗಿರುತ್ತವೆ :

**ಮಾದರಿ ಜಾತಕದಲ್ಲಿರುವ ಬ್ರಹ್ಮದಶೆಗಳು**

| | ವರ್ಷಗಳು |
|---|---|
| ಸಿಂಹ | 10 0 0 |
| ಕರ್ಕಾಟಕ | 7 0 0 |
| ಮಿಥುನ | 4 0 0 |
| ವೃಷಭ | 7 0 0 |
| ಮೇಷ | 10 0 0 |
| ಮೀನ | 11 0 0 |

| | ವರ್ಷಗಳು |
|---|---|
| ಕುಂಭ | 2 0 0 |
| ಮಕರ | 1 0 0 |
| ಧನುಸ್ | 12 0 0 |
| ವೃಶ್ಚಿಕ | 11 0 0 |
| ತುಲಾ | 4 0 0 |
| ಕನ್ಯಾ | 9 0 0 |

ಕೆಲವರ ಅಭಿಪ್ರಾಯದಂತೆ, ಲಗ್ನವು ಬೆಸ ಅಥವಾ ಸಮವಾಗಿರುವಾಗ ದಶಾವಧಿಯನ್ನು ಕ್ರಮವಾಗಿ ನೇರವಾಗಿ ಅಥವಾ ಹಿಮ್ಮುಖವಾಗಿ ಎಣಿಸಬೇಕು.

## 96. ಯೋಗಾರ್ಧ ದಶೆ

ಲಗ್ನ ಸಪ್ತಮ ಇವುಗಳಲ್ಲಿ ಯಾವುದು ಪ್ರಬಲವೋ ಅದರಿಂದ ದಶಾರಂಭವಾಗುತ್ತದೆ. ಪ್ರಾರಂಭ ದಶೆಯ ರಾಶಿಯು ಬೆಸವೋ ಸಮವೋ ಆಗಿರುವ ಕ್ರಮದಲ್ಲಿ ದಶಾವಧಿಯ ಅನುಕ್ರಮವು ನೇರವಾಗಿಯೋ ಹಿಮ್ಮುಖವಾಗಿಯೋ ಇರುತ್ತದೆ. ಒಂದು ರಾಶಿಯ ಯೋಗಾರ್ಧ ದಶಾ ಅವಧಿಯು ಚರ ಸ್ಥಿರ ದಶಾವಧಿಗಳ ಮೊತ್ತದ ಅರ್ಧದಷ್ಟು.

ಇಪ್ಪತ್ತೇಳನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಯೋಗಾರ್ಧ ದಶೆಗಳ ಅವಧಿ ಅನುಕ್ರಮವಾಗಿ ಕಂಡುಹಿಡಿಯಿರಿ.**

ಲಗ್ನ ಸಪ್ತಮಗಳ ಪೈಕಿ, ಲಗ್ನವೇ ಪ್ರಬಲ. ಏಕೆಂದರೆ, ವೃಷಭದ ಒಟ್ಟಾರೆಯ ಬಲವು ವೃಶ್ಚಿಕದ ಬಲಕ್ಕಿಂತ ಹೆಚ್ಚಾಗಿದೆ. ಆದಕಾರಣ ಮೊದಲನೆಯ ಯೋಗಾರ್ಧಕಶೆಯು ವೃಷಭದ್ದು. ಮೊದಲನೆಯ ದಶೆಯ ರಾಶಿಯು ಸಮವಾದ ಕಾರಣ, ದಶಾನುಕ್ರಮವು ಹಿಮ್ಮುಖ ಅಂದರೆ ವೃಷಭ, ಮೇಷ ಇತ್ಯಾದಿ. ವೃಷಭ ಯೋಗಾರ್ಧ ದಶೆಯ ಅವಧಿಯು (ವೃಷಭದ ಚರದಶೆ+ ವೃಷಭದ ಸ್ಥಿರದಶೆ) ಇವುಗಳ ಮೊತ್ತದ ಅರ್ಧ.

$=\frac{1}{2}$ (ವರ್ಷಗಳು 7–0–0 + 8–0–0) $=7\frac{1}{2}$ ವರ್ಷಗಳು.

ಇದೇ ರೀತಿ ಎಣಿಸಿದರೆ, ಯೋಗಾರ್ಧ ದಶೆಗಳೂ, ಅವುಗಳ ಅವಧಿಗಳೂ ಹೀಗಿರುತ್ತವೆ :

| | ವರ್ಷ | ತಿಂಗಳು | ದಿನಗಳು |
|---|---|---|---|
| ವೃಷಭ | 7 | 6 | 0 |
| ಮೇಷ | 6 | 6 | 0 |
| ಮೀನ | 5 | 0 | 0 |
| ಕುಂಭ | 9 | 0 | 0 |
| ಮಕರ | 7 | 0 | 0 |
| ಧನುಸ್ | 5 | 6 | 0 |
| ವೃಶ್ಚಿಕ | 9 | 6 | 0 |
| ತುಲಾ | 4 | 6 | 0 |
| ಕನ್ಯಾ | 8 | 0 | 0 |
| ಸಿಂಹ | 7 | 0 | 0 |
| ಕರ್ಕಾಟಕ | 5 | 0 | 0 |
| ಮಿಥುನ | 8 | 6 | 0 |
| | 83 | 0 | 0 |

ಕೆಲವು ಪಂಡಿತರು, ಸ್ತ್ರೀಯರ ಅನ್ವಯಲಗ್ನ ಸಪ್ತಮಗಳಲ್ಲಿ ಯಾವುದು ಪ್ರಬಲವಾಗಿದ್ದರೂ ಸಪ್ತಮದಿಂದಲೇ ದಶಾರಂಭವಾಗಬೇಕೆಂದು ಪ್ರತಿಪಾದಿಸುತ್ತಾರೆ.

## 97. ನಿರ್ಯಾಣ ಶೂಲ ದಶೆ

ಜೈಮಿನಿ ಜ್ಯೋತಿಷಾಭ್ಯಾಸಿಗಳು ಈ ದಶಾ ವಿಧಾನಕ್ಕೆ ಗಮನೀಯವಾದ ಪ್ರಾಮುಖ್ಯವನ್ನು ನೀಡುತ್ತಾರೆ. ನಿರ್ಯಾಣ ಶೂಲ ದಶೆಯ ವ್ಯಾಪ್ತಿ ಮತ್ತು ಅವಧಿ ಗಣಿಸುವ ಕ್ರಮದ ಬಗೆಗೆ ವ್ಯಾಖ್ಯಾನಕಾರರ ವಿವರಣೆಗಳು ಅಸ್ಪಷ್ಟವಾಗಿವೆ. ಆದಕಾರಣ ನಾನು ಹೆಚ್ಚು ಪ್ರಚಲಿತವಾದ ಕ್ರಮವನ್ನು ಕೊಡುತ್ತೇನೆ. ಲಗ್ನವು ಬೆಸರಾಶಿಯಾದರೆ ದಶೆಯು ಲಗ್ನದಿಂದ ಪ್ರಾರಂಭವಾಗಬೇಕು. ಲಗ್ನವು ಸಮರಾಶಿಯಾದರೆ ದಶೆಯು ಲಗ್ನದಿಂದ ಸಪ್ತಮ ರಾಶಿಯಿಂದ ಪ್ರಾರಂಭ. ಲಗ್ನವು ಬೆಸವೋ ಸಮವೋ ಆಗಿರುವ ಕ್ರಮದಲ್ಲಿ ದಶಾನುಕ್ರಮದ ಎಣಿಕೆಯು ನೇರವೋ ಹಿಮ್ಮುಖವೋ ಆಗಿರುತ್ತದೆ. ಪ್ರತಿ ದಶೆಯ ಅವಧಿಯು 9 ವರ್ಷಗಳು.

ಇಪ್ಪತ್ತೆಂಟನೆಯ ಉದಾಹರಣೆ: **ಮಾದರಿ ಜಾತಕದಲ್ಲಿ ನಿರ್ಯಾಣ ಶೂಲ ದಶೆಯನ್ನು ಗುಣಿಸಿ.**

ಲಗ್ನವಾದ ವೃಷಭ ಸಮರಾಶಿ.

ದಶೆಯು ಸಪ್ತಮವಾದ ವೃಶ್ಚಿಕದಿಂದ ಪ್ರಾರಂಭವಾಗಿ ತುಲಾ ಇತ್ಯಾದಿಯಾಗಿ ಹಿಮ್ಮುಖವಾಗಿ ಸಾಗುತ್ತದೆ. ದಶಾವಧಿ 9 ವರ್ಷಗಳು. ಕ್ರಮ ಕೆಳಗೆ ಇರುವಂತೆ:—

| | ವರ್ಷಗಳು | | |
|---|---|---|---|
| ವೃಶ್ಚಿಕ | 9 | 0 | 0 |
| ತುಲಾ | 9 | 0 | 0 |
| ಕನ್ಯಾ | 9 | 0 | 0 |
| ಸಿಂಹ | 0 | 0 | 0 |
| ಕಟಕ | 9 | 0 | 0 |
| ಮಿಥುನ | 9 | 0 | 0 |
| ವೃಷಭ | 9 | 0 | 0 |
| ಮೇಷ | 9 | 0 | 0 |
| ಮೀನ | 9 | 0 | 0 |
| ಕುಂಭ | 9 | 0 | 0 |
| ಮಕರ | 9 | 0 | 0 |
| ಧನುಸ್ | 9 | 0 | 0 |
| | 108 | 0 | 0 |

## 98. ನಿರ್ಯಾಣ ಫಲ ಶೂಲ ದಶೆ

ಇದನ್ನು ಜಾತಕ ವ್ಯಕ್ತಿಯ ಮರಣವನ್ನು ಸೂಚಿಸಲು ಬಳಸಲಾಗುತ್ತದೆ. ಪ್ರತಿ ದಶೆಯ ಅವಧಿ 9 ವರ್ಷಗಳು. ಮಾರಕ ರಾಶಿಗೆ ಸಪ್ತಮ ರಾಶಿಯಿಂದ ಪ್ರಾರಂಭವಾಗಿ ಲಗ್ನವು ಬೆಸವಾದರೆ ನೇರವಾಗಿಯೂ ಸಮವಾದರೆ ಹಿಮ್ಮುಖವಾಗಿಯೂ ನಡೆಯುತ್ತದೆ. ಮಾರಕ ರಾಶಿಯನ್ನು ದಶೆಯು ಸೇರಿದಾಗ ಮಾರಕವುಂಟಾಗುತ್ತದೆಂದು ಹೇಳಿದೆ. ಇದು ಸಾಧಾರಣವಾಗಿ 54ರಿಂದ 63ನೆಯ ವಯಸ್ಸಿನ ಸುಮಾರಿನಲ್ಲಿ ಒದಗುತ್ತದೆ. ಆದಕಾರಣ ಇದನ್ನು ಪೂರ್ಣಾಯು ಜಾತಕಗಳಿಗೆ ಪ್ರಯೋಗಿಸಲು ಆಗುವುದಿಲ್ಲ.

## 99. ಇತರ ದಶೆಗಳು

ಜೈಮಿನಿಯು ಮಂಡೂಕದಶೆ, ನಕ್ಷತ್ರದಶೆ, ಶೂಲದಶೆ, ದೃಗ್‌ದಶೆ ಮುಂತಾಗಿ ಅನೇಕ ದಶೆಗಳನ್ನು ಹೇಳುತ್ತಾನೆ. ಅವನ್ನೆಲ್ಲ ನಾನು ಈ ಪ್ರದೀಪಿಕೆಯಲ್ಲಿ ತೆಗೆದುಕೊಳ್ಳುವುದಿಲ್ಲ. ಪರಾಶರನೂ ಅನೇಕ ದಶೆಗಳನ್ನು ಹೆಸರಿಸುತ್ತಾನಾದರೂ, ಎರಡು ಅಂದರೆ ವಿಂಶೋತ್ತರಿ ಮತ್ತು ಅಷ್ಟೋತ್ತರಿ ದಶೆಗಳು ಮಾತ್ರ ಪ್ರಚಾರದಲ್ಲಿವೆ. ಈ ಎರಡರಲ್ಲೂ ತುಂಬ ಜನಪ್ರಿಯವಾಗಿರುವುದು ವಿಂಶೋತ್ತರಿ. ಇದೇ ರೀತಿಯಲ್ಲಿ, ಜೈಮಿನಿಯು ಅನೇಕ ದಶೆಗಳನ್ನು ಹೇಳಿದರೂ ಮತ್ತು ಕೆಲವು ಸಲ ಪ್ರಾಸಂಗಿಕವಾಗಿ ಇಂಥ ನಿರ್ದಿಷ್ಟ ದಶೆಯನ್ನು ಇಂಥ ನಿರ್ದಿಷ್ಟ ಭಾವ ಫಲ ಹೇಳಲು ಉಪಯೋಗಿಸಬೇಕೆಂದೂ ಸೂಚಿಸಿದರೂ ಕೂಡ ಚರದಶೆ, ತ್ರಿಕೋಣದಶೆ ಮತ್ತು ಸ್ಥಿರದಶೆ ಇವು ಮೂರನ್ನೂ ಯುಕ್ತವಾದ ರೀತಿಯಲ್ಲಿ ಓದಿ ತಿಳಿದುಕೊಂಡರೆ, ಆ ಮೂಲಕ ವ್ಯಕ್ತಿಯ ಬದುಕಿನ ಎಲ್ಲ ಘಟನೆಗಳನ್ನು ಮುನ್ನುಡಿಯಲು ಸಾಧ್ಯವಾಗುತ್ತದೆ. ಅಭ್ಯಾಸಿಗಳಾದ ಸಂಶೋಧಕರು ತಮ್ಮ ಒಲುಮೆಯ ಪ್ರಕಾರ ಹಲವಾರು ದಶೆಗಳನ್ನು ಪ್ರಯೋಗಿಸಿ ನೋಡಿ, ತಮಗೆ ಉತ್ಕೃಷ್ಟವೂ ತೃಪ್ತಿಕರವೂ ಆಗಿ ತೋರಿದ ದಶೆಯನ್ನು ಆರಿಸಿಕೊಳ್ಳಬಹುದು.

ಆರನೆಯ ಅಧ್ಯಾಯ

# ಆಯುರ್ದಾಯ ನಿರ್ಣಯ

## 100. ಸಾಮಾನ್ಯ ಅವಲೋಕನೆ

ಆಯುರ್ದಾಯ ನಿರ್ಣಯವು ಕಬ್ಬಿಣದ ಕಡಲೆ. ಹಲವು ವಿಧಾನಗಳು—ಕೆಲವು ಅವಧಾನಶೀಲವೂ ಕೆಲವು ಗಣಿತಪ್ರಧಾನವೂ ಆದ ವಿಧಾನಗಳು—ಪ್ರಚಾರದಲ್ಲಿವೆ. ಆದರೆ ಗಣಿತಪ್ರಧಾನವು ವ್ಯವಹಾರದಲ್ಲಿ ನೆಚ್ಚಿಕೊಂಡ ಹಾಗೆ ನಡೆಯುವಂತೆ ಕಾಣಬರುವುದಿಲ್ಲ. ಅವಧಾನಶೀಲ ವಿಧಾನಗಳ ಪೈಕಿ, ಮಾರಕನಿರ್ಣಯದ ಜತೆಗೆ ಗೋಚಾರ ಫಲಗಳನ್ನೂ ಸೇರಿಸಿಕೊಂಡು ಪ್ರಯೋಗಿಸಿದರೆ ಸಾಕಷ್ಟು ಪರಿಣಾಮವಾಗಿ ಆಯುರ್ದಾಯವನ್ನು ನಿಷ್ಕರ್ಷಿಸ ಬಹುದಾಗಿದೆ.

## 101. ಜೈಮಿನಿಯ ವಿಧಾನಗಳು

ಜೈಮಿನಿಯು ಆಯುರ್ದಾಯ ನಿರ್ಣಯಕ್ಕಾಗಿ ಅನೇಕ ವಿಧಾನಗಳನ್ನು ಕೊಟ್ಟಿದ್ದಾನಾದರೂ, ಆ ವಿಧಿಗಳೆಲ್ಲವೂ ವಿವಿಧ ಅಧ್ಯಾಯಗಳಲ್ಲಿ ಯಾವೊಂದು ಕೋರಿಕೆಯ ಸಂಬಂಧವೂ ಇಲ್ಲದಂತೆ ಚೆದುರಿಹೋಗಿರುವುದರಿಂದ ಅಭ್ಯಾಸಿಗೆ ಗೊಂದಲವುಂಟುಮಾಡುತ್ತವೆ. ಈ ಕೃತಿಯಲ್ಲಿ, ಯಾವ ವಿಧಾನಗಳು ನನ್ನ ನಮ್ರ ಅಭಿಪ್ರಾಯದಲ್ಲಿ ಕರಾರುವಾಕ್ಕಾದ ಭವಿಷ್ಯ ನುಡಿಯಲು ಅವಲಂಬನ ಯೋಗ್ಯವಾಗಿ ಕಂಡುಬಂದಿವೆಯೋ ಅವುಗಳ ಚರ್ಚೆಯಷ್ಟಕ್ಕೆ ಸೀಮಿತಗೊಳಿಸಿದ್ದೇನೆ. ಈ ಪ್ರದೀಪಿಕೆಯು ಸಮಸ್ತ ಜೈಮಿನಿ ತತ್ವ ಸಿದ್ಧಾಂತಗಳ ಯಥಾವತ್ತಾದ ಭಾಷಾಂತರವಲ್ಲವೆಂದು ವಾಚಕರಿಗೆ ನೆನಪು ಮಾಡಿಕೊಡಬೇಕಾಗಿಲ್ಲ. ಯಾವ ಮೂಲತತ್ವಗಳನ್ನು ಸಾಕಷ್ಟು ತೃಪ್ತಿಕರವಾಗಿ ಪರೀಕ್ಷಿಸಲು ನನಗೆ ಅವಕಾಶವುಂಟಾಗಿತ್ತೋ ಅವನ್ನು ಇಲ್ಲಿ ಸಂಗ್ರಹವಾಗಿ ಹೇಳಿದ್ದೇನೆ. ಜೈಮಿನಿಯು

ಸೂಚಿಸಿರುವ ಹಲವಾರು ವಿಧಾನಗಳನ್ನು ಪೂರಾಗಿ ವಿಂಗಡಿಸಿದ್ದೇನೆ. ಅನುಕೂಲಕ್ಕಾಗಿ ಅವನ್ನು ಅ, ಇ, ಉ ಎಂದು ಕರೆಯೋಣ.

## 102. ಆಯುರ್ದಾಯದ ವಿಧಗಳು

ಎಲ್ಲ ಜ್ಯೋತಿಷ ಲೇಖಕರೂ ಮನುಷ್ಯನ ಆಯುರ್ದಾಯವನ್ನು ಮೂರು ಖಚಿತವಾದ ವಿಧಗಳಾಗಿ ವಿಂಗಡಿಸಿದ್ದಾರೆ. ಯಾವುವೆಂದರೆ, ಅಲ್ಪಾಯು, ಮಧ್ಯಾಯು, ದೀರ್ಘಾಯು. ಆದರೆ ಆಯಾ ಲೇಖಕರು ಇವಕ್ಕೆ ವಿವಿಧ ಅವಧಿಗಳನ್ನು ಗೊತ್ತುಪಡಿಸುತ್ತಾರೆ. ಜೈಮಿನಿ ವಿಧಾನದ ಪ್ರಯೋಗದ ಅಪೇಕ್ಷೆ ಹೆಚ್ಚು ಮನ್ನಣೆಗೆ ಪಾತ್ರವಾದವು ಹೀಗಿವೆ, ಅಲ್ಪಾಯು 32 ವರ್ಷ ಗಳವರೆಗೆ, ಮಧ್ಯಾಯು 33ರಿಂದ 64 ವರ್ಷಗಳವರೆಗೆ ಮತ್ತು ದೀರ್ಘಾಯು 65ರಿಂದ 100 ವರ್ಷಗಳವರೆಗೆ.

## 103. ಮೊದಲ ವಿಧಾನ

ಎರಡೆರಡು ಅಂಶಗಳುಳ್ಳ ಮೂರು ಜೋಡಿ ಸಂಜ್ಞೆಗಳನ್ನು ಆಯು ರ್ದಾಯ ನಿಷ್ಕರ್ಷಿಸಲು ಬಳಸಲಾಗುತ್ತದೆ : ಅವು ಯಾವುವೆಂದರೆ : (ಅ) ಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿ, (ಇ) ಲಗ್ನ ಮತ್ತು ಚಂದ್ರ ಮತ್ತು (ಉ) ಲಗ್ನ ಮತ್ತು ಹೋರಾ ಲಗ್ನ.

## 104. ಅಲ್ಪಾಯು

ಒಂದು ಸಂಜ್ಞೆಯ (ಅಂಕ 103) ಎರಡು ಅಂಶಗಳ ಪೈಕಿ, (ಅ) ಒಂದು ಚರದಲ್ಲೂ ಮತ್ತೊಂದು ದ್ವಿಸ್ವಭಾವದಲ್ಲೂ ಇದ್ದರೆ, (ಇ) ಎರಡೂ ಸ್ಥಿರ ಥಲ್ಲಿದ್ದರೆ, ಮತ್ತು (ಉ) ಒಂದು ದ್ವಿಸ್ವಭಾವದಲ್ಲಿದ್ದು ಮತ್ತೊಂದು ಚರ ದಲ್ಲಿದ್ದರೆ, ಅಲ್ಪಾಯುವು ಸೂಚಿತವಾಗುತ್ತದೆ. ಮೂರು ಸಂಜ್ಞೆಗಳನ್ನು ಅವು ಗಳ ಎರಡೆರಡು ಅಂಶಗಳನ್ನೂ ಸಮಗ್ರವಾಗಿ ಪರಿಶೀಲನೆ ಮಾಡಬೇಕು. ಅಲ್ಪಾಯುವಿನ ಅವಧಿ 32 ವರ್ಷಗಳು.

## 105. ಮಧ್ಯಾಯು

ಎರಡು ಅಂಶಗಳ ಪೈಕಿ (ಅ) ಒಂದು ಚರದಲ್ಲೂ ಇನ್ನೊಂದು ಸ್ಥಿರ ದಲ್ಲೂ ಇದ್ದರೆ, (ಇ) ಒಂದು ಸ್ಥಿರದಲ್ಲೂ ಮತ್ತೊಂದು ಚರದಲ್ಲೂ ಇದ್ದರೆ ಮತ್ತು (ಉ) ಎರಡೂ ದ್ವಿಸ್ವಭಾವದಲ್ಲಿದ್ದರೆ ಮಧ್ಯಾಯುವು ಸೂಚಿತ. ಮೂರು ಸಂಜ್ಞೆಗಳ ಜೋಡಿಗಳನ್ನೂ ಪರಿಶೀಲಿಸಬೇಕು. ಮಧ್ಯಾಯುವಿನ ಅವಧಿ 64 ವರ್ಷಗಳು.

## 106. ಪೂರ್ಣಾಯು

ಎರಡು ಅಂಶಗಳ ಪೈಕಿ (ಅ) ಎರಡೂ ಚರದಲ್ಲಿದ್ದರೆ, (ಇ) ಒಂದು ಸ್ಥಿರದಲ್ಲೂ ಮತ್ತೊಂದು ದ್ವಿಸ್ವಭಾವದಲ್ಲೂ ಇದ್ದರೆ ಮತ್ತು (ಉ) ಒಂದು ದ್ವಿಸ್ವಭಾವದಲ್ಲೂ ಒಂದು ಸ್ಥಿರದಲ್ಲೂ ಇದ್ದರೆ, ಪೂರ್ಣಾಯು ಉಂಟಾಗುತ್ತದೆ. ಮೂರು ಸಂಜ್ಞೆಗಳ ಎರಡೆರಡೂ ಜೋಡಿಗಳನ್ನೂ ಪರಿಶೀಲಿಸಬೇಕು. ಪೂರ್ಣಾಯುವಿನ ಅವಧಿಯು ಕೆಲವರ ಪ್ರಕಾರ 130 ವರ್ಷಗಳು. ಮತ್ತೆ ಕೆಲವರ ಪ್ರಕಾರ 120 ವರ್ಷಗಳು. ಆದರೆ ಜೈಮಿನಿ ತತ್ವಗಳನ್ನು ತಿಳಿಯಿಹೇಳುವ ಸಲುವಾಗಿ ಈ ಅವಧಿಯನ್ನು 100 ವರ್ಷಗಳೆಂದು ನಾವು ಭಾವಿಸ ಬಯಸುತ್ತೇವೆ.

## 107. ವ್ಯತಿರಿಕ್ತ ಪರಿಣಾಮಗಳ ಹೊಂದಾಣಿಕೆ

ಎರಡು ಅಥವಾ ಮೂರು ಸಂಜ್ಞೆಗಳ ಅಂಶಗಳೂ ಒಂದೇ ಆಯುಸ್ಸನ್ನು ಸೂಚಿಸಿದರೆ, ಅದನ್ನು ಅಂಗೀಕರಿಸಬೇಕು. ಪ್ರತಿ ಸಂಜ್ಞೆಯೂ ಪ್ರತ್ಯೇಕ ಅವಧಿಯನ್ನು ಸೂಚಿಸಿದರೆ, ಆಗ ಲಗ್ನ ಮತ್ತು ಹೋರಾ ಲಗ್ನ ಸೂಚಿಸುವ ಅವಧಿಗೆ ಪುರಸ್ಕಾರವೀಯಬೇಕು. ಮೂರೂ ವಿವಿಧ ಅವಧಿಗಳಾದರೆ ಮತ್ತು ಚಂದ್ರನು ಲಗ್ನದಲ್ಲೋ ಸಪ್ತಮದಲ್ಲೋ ಇದ್ದರೆ ಲಗ್ನ ಚಂದ್ರರು ಸೂಚಿಸುವ ಆಯುರ್ದಾಯವನ್ನು ಪುರಸ್ಕರಿಸತಕ್ಕುದು. ಈ ವಿಧಾನದ ಮೇರೆಗೆ ಬಂದ ಆಯುರವಧಿಯನ್ನು ಅ ಅನ್ನಿ.

## 108. ಕರಾರುವಾಕ್ಕಾಗಿ ಆಯುರ್ದಾಯದ ಎಣಿಕೆ

ಜಾತಕನ ಅವಧಿಯು ಅಲ್ಪಾಯುವೋ ಮಧ್ಯಾಯುವೋ ಪೂರ್ಣಾಯುವೋ ನಿಷ್ಕರ್ಷೆ ಮಾಡಿದ ತರುವಾಯ ಆ ವ್ಯಕ್ತಿಯು ಕರಾರುವಾಕ್ಕಾಗಿ ಎಷ್ಟು ವರ್ಷ ಬದುಕುತ್ತಾನೆಂಬುದನ್ನು ಈ ರೀತಿ ಗುಣಿಸಬಹುದು. ಮಧ್ಯಾಯುವು ಸೂಚಿತವಾಗಿದೆ ಅನ್ನಿ. ಆ ಅವಧಿಯು 66 ವರ್ಷಗಳೂ ಪೂರ್ತಿಯಾಗಿ ಲಭಿಸಬೇಕಾದರೆ ಲಗ್ನಾಧಿಪತಿಯೂ ಅಷ್ಟಮಾಧಿಪತಿಯೂ ತಾವಿರುವ ರಾಶಿಗಳ ಪ್ರಾರಂಭ ಭಾಗದಲ್ಲಿರಬೇಕು ; ಸಂಬಂಧಪಟ್ಟ ರಾಶಿಗಳ ಕಡೆಯ ಭಾಗದಲ್ಲಿದ್ದರೆ ಶೂನ್ಯಫಲ ಕೊಡುತ್ತಾರೆ. ಆಗ ಜಾತಕನು ಅಲ್ಪಾಯುರವಧಿಯ ಕಡೆಗೆ ಸಾಯುತ್ತಾನೆ. ಆ ಅಧಿಪತಿಗಳು ಮಧ್ಯಭಾಗದಲ್ಲಿದ್ದರೆ, ತ್ರೈರಾಶಿಯ ಪ್ರಕಾರ ಅವರು ಕೊಡುವ ವರ್ಷಗಳನ್ನು ನಿಷ್ಕರ್ಷಿಸಬೇಕು. ಎರಡು ಅಂಶಗಳು

(ಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿ) ಕೊಡುವ ವರ್ಷಗಳ ಮೊತ್ತವನ್ನು 2ರಿಂದ ಭಾಗಿಸಿದರೆ, ಆ ಆಯುರ್ದಾಯದ ಅವಧಿಯಲ್ಲಿ ಸಂದಾಯವಾಗುವ ವರ್ಷಗಳು ಕರಾರುವಾಕ್ಕಾಗಿ ಸಿಗುತ್ತದೆ.

ಪೂರ್ಣಾಯು ಸೂಚಿತವಾಗಿದೆ ಅನ್ನಿ. ಲಗ್ನಾಧಿಪತಿಯೂ ಅಷ್ಟಮಾಧಿಪತಿಯೂ ತಾವಿರುವ ರಾಶಿಗಳ 25° ಮತ್ತು 12° ಗಳಲ್ಲಿದ್ದಾರೆಂದು ಇಟ್ಟುಕೊಳ್ಳಿ. ಆಗ ಲಗ್ನಾಧಿಪತಿಯು ತಾನಿರುವ ರಾಶಿಯ ಪ್ರಾರಂಭ ಅಂಶದಿಂದ 25° ದೂರದಲ್ಲಿರುತ್ತಾನೆ. ಡಿಗ್ರಿಗೆ 1.1 ವರ್ಷದ ಪ್ರಕಾರ ಪರಿವರ್ತಿಸಿದರೆ $25 \times 1.1 = 27.5$ ವರ್ಷಗಳಾಗುತ್ತದೆ. ಅಂದರೆ ಲಗ್ನಾಧಿಪತಿಯು 5.5 (33–27.5) ವರ್ಷಗಳನ್ನು ಪೂರ್ಣಾಯುವಿನ ಅವಧಿಯಲ್ಲಿ ನೀಡುತ್ತಾನೆ ಅಂದ ಹಾಗಾಯಿತು. ಇದೇ ರೀತಿ ಅಷ್ಟಮಾಧಿಪತಿಯೂ ರಾಶಿಯ ಪ್ರಾರಂಭದಿಂದ 12° ದೂರ ಸರಿದ ಕಾರಣ, ಪರಿವರ್ತನೆ ಪ್ರಕಾರ $12 \times 1.1 = 13.2$ ವರ್ಷಗಳಾಗುತ್ತವೆ. ಅಥವಾ ಅಷ್ಟಮಾಧಿಪತಿಯು 19.8 (33–13.2) ವರ್ಷಗಳನ್ನು ತನ್ನ ಹಿಸ್ಸೆಯಾಗಿ ನೀಡುತ್ತಾನೆ. ಇವರಿಬ್ಬರು ಅಧಿಪತಿಗಳಿಂದ ಒಟ್ಟಿನಲ್ಲಿ ಸಂದಾಯವಾದ ಆಯುರವಧಿಯು ವಾಸ್ತವವಾಗಿ ಇಬ್ಬರೂ ಪ್ರತ್ಯೇಕವಾಗಿ ಕೊಡುವ ವರ್ಷಗಳ ಮೊತ್ತದ ಮಧ್ಯಾಂಶವಾಗುತ್ತದೆ. ವಾಸ್ತವವಾಗಿ $\frac{19.8 + 5.5}{2} = 12.65$

ವರ್ಷಗಳಾಗುತ್ತವೆ. ಇದನ್ನು ಪೂರ್ಣಾಯುವು ಪ್ರಾರಂಭವಾಗುವ 66 ವರ್ಷಗಳಿಗೆ ಸೇರಿಸಬೇಕು. ಆಗ ಆಯುರ್ದಾಯದ ಪೂರ್ತಿ ಅವಧಿಯು $66 + 12.65 = 78.65$ ವರ್ಷಗಳಾಗುತ್ತವೆ.

**109. ಸಾರಾಂಶ**

ಮುಂದೆ ಸೂಚಿಸಿರುವ ಸೂತ್ರವು ಆಯುರ್ದಾಯದ ನಿಷ್ಕೃಷ್ಟ ಅವಧಿಯನ್ನು ಕಂಡುಹಿಡಿಯಲು ಅನುಕೂಲವಾಗುತ್ತದೆ.

ಅಲ್ಪಾಯು : (30–ಕ್ಷ) = 1.1
ಮಧ್ಯಾಯು : ಅ+ (30–ಕ್ಷ) = 1.1
ಪೂರ್ಣಾಯು : ಮ+ (30–ಕ್ಷ) = 1.1

ಇಲ್ಲಿ ಕ್ಷ = ಗ್ರಹ ಸ್ಪಷ್ಟ (ರಾಶಿ ವಿನಾ) ಇರುವ ಒಟ್ಟಿನ ಅಂಶ. ಅ= ಅಲ್ಪಾಯು ಅವಧಿ. ಮ = ಮಧ್ಯಾಯು ಅವಧಿ.

## 110. ಎರಡನೆಯ ವಿಧಾನ

ಲಗ್ನದಿಂದ ಅಷ್ಟಮಾಧಿಪತಿ ಮತ್ತು ಸಪ್ತಮದಿಂದ ಅಷ್ಟಮದ ಅಧಿಪತಿ ಇವರಲ್ಲಿ ಪ್ರಬಲನನ್ನು ಕಂಡುಹಿಡಿಯಿರಿ. ಈ ಅಧಿಪತಿಯು ಕೇಂದ್ರ, ಪಣ ಪರ ಆಪೋಕ್ಲಿಮಗಳಲ್ಲಿರುವುದರ ಕ್ರಮಕ್ಕೆ ತಕ್ಕಂತೆ ಆಯುರ್ದಾಯದ ಅವಧಿಯು ದೀರ್ಘ ಮಧ್ಯ ಅಲ್ಪ ರೀತಿಯದಾಗಿರುತ್ತದೆ. ಈ ವಿಧಾನವಾಗಿ ಕಂಡುಹಿಡಿದ ಆಯುರ್ದಾಯವನ್ನು **ಕ** ಅನ್ನಿ.

## 111. ಮೂರನೆಯ ವಿಧಾನ

ಇದೇ ವಿಧಿಗಳನ್ನು ಅನ್ವಯಿಸಿ ಆತ್ಮಕಾರಕನಿಂದ ಅಷ್ಟಮದ ಅಧಿಪತಿ ಮತ್ತು ಆತ್ಮಕಾರಕನಿಂದ ಸಪ್ತಮಕ್ಕೆ ಅಷ್ಟಮ ಭಾವದ ಅಧಿಪತಿ ಇವರಲ್ಲಿ ಪ್ರಬಲನನ್ನು ಕಂಡುಹಿಡಿದು ಆಯುರ್ದಾಯದ ಅವಧಿಯನ್ನು ಗೊತ್ತು ಹಚ್ಚಿ. ಹೀಗೆ ಸಂದ ಆಯುರ್ದಾಯದ ಅವಧಿಯನ್ನು **ಆ** ಅನ್ನಿ. ಆದರೆ ಆತ್ಮಕಾರಕನು ಲಗ್ನದಿಂದ ನವಮದಲ್ಲಿದ್ದರೆ, ಅಲ್ಪಾಯು ಪೂರ್ಣಾಯುವಾಗು ತ್ತದೆ ಮತ್ತು ವ್ಯತಿರಿಕ್ತನಾದರೆ ಪೂರ್ಣಾಯುವು ಅಲ್ಪಾಯುವಾಗುತ್ತದೆ. ಆದರೆ ಮಧ್ಯಾಯುವು ಮಧ್ಯಾಯುವಾಗಿಯೇ ಉಳಿಯುತ್ತದೆ.

ಮೂರನೆಯ ಅಧ್ಯಾಯದ ಎರಡನೆಯ ಪಾಠದಲ್ಲಿ ಆಯುರ್ದಾಯ ವನ್ನು ನಿಷ್ಕರ್ಷಿಸುವಾಗ ಲಗ್ನ ಚಂದ್ರರನ್ನು ಪರಿಕಿಸುವ ರೀತಿಯಲ್ಲಿಯೇ ಲಗ್ನ ಆತ್ಮಕಾರಕರನ್ನೂ ಪರಿಕಿಸಬೇಕು—ಎಂದು ಸೂಚಿತವಾಗಿದೆ.

## 112. ಪರಿಶೀಲನೆಗಳು

ಪರಾಶರಿ ಪದ್ಧತಿಯಲ್ಲಿರುವಂತೆ, ಜೈಮಿನಿಯಲ್ಲೂ ಆಯುರ್ದಾಯ ನಿರ್ಣಯಕ್ಕೆ ಹಲವಾರು ವಿಧಾನಗಳನ್ನು ಕೊಟ್ಟಿದೆ. ಆದರೆ ಎಲ್ಲೂ, ಯಾವ ಜಾತಕ ಪರಿಸ್ಥಿತಿಗೆ ಯಾವ ವಿಧಾನವು ಅನ್ವಯ, ಯುಕ್ತ, ಎಂಬ ಬಗೆಗೆ ಯಾವ ಸುಳಿವನ್ನೂ ಕೊಟ್ಟಿಲ್ಲ. ಆದಕಾರಣ ವ್ಯವಹಾರ ದೃಷ್ಟಿಯಿಂದ ಮುಂದಿನ ಕ್ರಮವನ್ನು ಅವಲಂಬಿಸಬಹುದು ಎಂದು ನನಗೆ ಅನ್ನಿಸುತ್ತದೆ.

ಆಯುರ್ದಾಯದ ಅವಧಿಗಳನ್ನು **ಅ, ಕ, ಆ** ಪ್ರಕಾರ ಕಂಡುಹಿಡಿಯಿರಿ. ಯಾರ ಅವಧಿಯು ಹೆಚ್ಚು ಕಾರಣಗಳಿಗಾಗಿ ಗ್ರಾಹ್ಯ ಎಂಬುದನ್ನು ಖಚಿತ ಪಡಿಸಿ. ಮೊದಲನೆಯ ವಿಧಾನವು ಅಲ್ಪಾಯುವನ್ನೂ, ಎರಡನೆಯ ವಿಧಾನವು ಮಧ್ಯಾಯುವನ್ನೂ ಮೂರನೆಯ ವಿಧಾನವು ಮಧ್ಯಾಯುವನ್ನೂ ಸೂಚಿಸಿದರೆ,

ಮಧ್ಯಾಯುವೇ ಸಿಂಧು ಎನ್ನಿ, ಮೂರೂ ಭಿನ್ನ ಅವಧಿಗಳನ್ನು ತೋರ್ಪಡಿಸಿದರೆ, ಆಗ **ಅ, ಕ** ಅಥವಾ **ಆ** ಗಳನ್ನು ಹೋರಾ ಲಗ್ನ, ಜನ್ಮಲಗ್ನ, ಆತ್ಮಕಾರಕ ಈ ಪೈಕಿ ಪ್ರಬಲವಾದುದಕ್ಕೆ ಹಚ್ಚಿ.

## 113. ಕಕ್ಷ ವೃದ್ಧಿ

ಇದರ ಅರ್ಥ ಆಯುರ್ದಾಯದ ಅವಧಿಯು ಹೆಚ್ಚುವುದು ಎಂದು —ಅಲ್ಪಾಯು ಮಧ್ಯಾಯುವೂ, ಮಧ್ಯಾಯು ದೀರ್ಘಾಯುವೂ ಆಗುವುದು.

## 114. ಕಕ್ಷ ವೃದ್ಧಿಯ ಪರಿಸ್ಥಿತಿಗಳು

ಮುಂದಿನ ಪರಿಸ್ಥಿತಿಗಳಲ್ಲಿ ಯಾವುದಾದರೊಂದು ಇದ್ದರೆ, ಕಕ್ಷವೃದ್ಧಿಯಾಗುತ್ತದೆ : (1) ಲಗ್ನವೂ ಸಪ್ತಮವೂ ಶುಭಗ್ರಹಗಳ ನಡುವೆ ಇರುವುದು, (2) ಆತ್ಮಕಾರಕ ಮತ್ತು ಆತ್ಮಕಾರಕನಿಂದ ಸಪ್ತಮ ಶುಭಗ್ರಹಗಳ ನಡುವೆ ಇರುವುದು, (3) ಲಗ್ನದಲ್ಲೋ ಸಪ್ತಮದಲ್ಲೋ ಅಥವಾ ಅವುಗಳಿಂದ ತ್ರಿಕೋಣದಲ್ಲೋ ಶುಭಗ್ರಹಗಳಿರುವುದು, (4) ಶುಭಗ್ರಹಗಳು ಆತ್ಮಕಾರಕನ ಸಂಗಡ ಅಥವಾ ಆತ್ಮಕಾರಕನಿಂದ ತ್ರಿಕೋಣಗಳಲ್ಲಿರುವುದು, (5) ಆತ್ಮಕಾರಕನು ಶುಭನಾಗಿ ನೀಚನಾಗದೆ ಉಚ್ಚನಾಗಿ ಅಥವಾ ಪಾಪಗ್ರಹಗಳ ಸಂಗಡ ಇರುವುದು, (6) ಗುರುವಿಗೆ ಎರಡು ಕಡೆಯಲ್ಲೋ ಅಥವಾ ತ್ರಿಕೋಣಗಳಲ್ಲೋ ಶುಭಗ್ರಹಗಳಿರುವುದು, (7) ಲಗ್ನಸ್ಥ ಅಥವಾ ಸಪ್ತಮಸ್ಥ ಗುರುವು ಪಾಪದೃಷ್ಟಿ ಅಥವಾ ಸಂಬಂಧವಿಲ್ಲದೆ ಇರುವುದು.

## 115. ಕಕ್ಷಹ್ರಾಸ

ಇದರ ಅರ್ಥ, ಒಂದು ಆಯುರ್ದಾಯದ ಅವಧಿಯು ಅದಕ್ಕಿಂತ ಕೆಳಗಿನ ಅವಧಿಗೆ ಇಳಿಯುವುದು, ಪೂರ್ಣಾಯುವು ಮಧ್ಯಾಯುವಾಗುವುದು, ಮಧ್ಯಾಯು ಅಲ್ಪಾಯುವಾಗುವುದು.

## 116. ಕಕ್ಷಹ್ರಾಸದ ಪರಿಸ್ಥಿತಿಗಳು

ಕಕ್ಷಹ್ರಾಸ ಆಗುವುದು ಯಾವಾಗ ಎಂದರೆ (1) ಲಗ್ನಾಷ್ಟಮದ ಅಧಿಪತಿ ಅಥವಾ ಸಪ್ತಮದಿಂದ ಅಷ್ಟಮ ಭಾವದ ಅಧಿಪತಿ ಆತ್ಮಕಾರಕನಾದಾಗ ಅಥವಾ ಆತ್ಮಕಾರಕನ ಸಂಗಡ ಕೂಡಿದಾಗ, (2) ಲಗ್ನ ಮತ್ತು

ಸಪ್ತಮ ಎರಡೂ ಪಾಪಿಗಳ ನಡುವೆ ಇದ್ದಾಗ ಅಥವಾ ಎರಡಕ್ಕೂ ತ್ರಿಕೋಣ ದಲ್ಲಿ ಪಾಪಿಗಳಿದ್ದಾಗ ಮತ್ತು (3) ಆತ್ಮಕಾರಕನೇ ಪಾಪಿಯಾಗಿ ನೀಚನಾದಾಗ ಅಥವಾ ಪಾಪಯುಕ್ತನಾಗಿದ್ದಾಗ.

## 117. ರಾಶಿ ವೃದ್ಧಿ

ಇದರ ಅರ್ಥ ಆಯುರ್ದಾಯವು ಒಂದು ರಾಶಿಯಷ್ಟು ಹೆಚ್ಚುವುದು. ಕಕ್ಷ ವೃದ್ಧಿಯಾಗಲು (ಅಂಕ 114) ಶುಭ ಗ್ರಹಗಳು ಯಾವ ಸ್ಥಾನಗಳಲ್ಲಿರ ಬೇಕೆಂದು ಸೂಚಿತವಾಗಿದೆಯೋ ಅಲ್ಲಿ ಪೂರ್ಣ ಚಂದ್ರ ಅಥವಾ ಶುಕ್ರ ಇದ್ದರೆ, ಆಗ ಆಯುರ್ದಾಯವು ಒಂದು ರಾಶಿಯಷ್ಟು ವೃದ್ಧಿಯಾಗುತ್ತದೆ.

## 118. ರಾಶಿಹ್ರಾಸ

ಇದರ ಅರ್ಥ ಆಯುರ್ದಾಯವು ಒಂದು ರಾಶಿಯಷ್ಟು ಕಡಿಮೆಯಾಗು ವುದು. ಯಾವ ಸ್ಥಳಗಳಲ್ಲಿ ಪಾಪಗ್ರಹಗಳಿದ್ದರೆ, ಕಕ್ಷಹ್ರಾಸವಾಗುವುದೋ ಅಲ್ಲಿ ಶನಿಯಿದ್ದರೆ ರಾಶಿಹ್ರಾಸವಾಗುತ್ತದೆ.

ಇಪ್ಪತ್ತೊಂಭತ್ತನೆಯ ಉದಾಹರಣೆ : **ಮಾ ದ ರಿ ಜಾ ತ ಕ ದ ಲ್ಲಿ ಆಯುರ್ದಾಯವನ್ನು ಕಂಡುಹಿಡಿಯಿರಿ.**

### ಮೊದಲನೆಯ ವಿಧಾನ

(1) ಲಗ್ನಾಧಿಪತಿ ಅಷ್ಟಮಾಧಿಪತಿ ದ್ವಿಸ್ವಭಾವ ಹಾಗೂ ಸ್ಥಿರ ರಾಶಿ ಗಳಲ್ಲಿದ್ದಾರೆ. ಆದಕಾರಣ, ಅಲ್ಪಾಯು.

(2) ಲಗ್ನ ಮತ್ತು ಚಂದ್ರ ಸ್ಥಿರದಲ್ಲೂ ಚರದಲ್ಲೂ ಇದ್ದಾರೆ— ಮಧ್ಯಾಯು.

(3) ಲಗ್ನ ಮತ್ತು ಹೋರಾ ಲಗ್ನ ಸ್ಥಿರದಲ್ಲೂ ಚರದಲ್ಲೂ ಇದ್ದಾರೆ— ಮಧ್ಯಾಯು.

∴ ಮಧ್ಯಾಯು ಅವಧಿಯೇ ಎರಡು ಸಂಜ್ಞೆಗಳಲ್ಲೂ ಸೂಚಿತವಾದ ಕಾರಣ, ಅದೇ ಅಂಗೀಕೃತ.

ಜಾತಕವು ಮಧ್ಯಾಯು ಪಂಗಡಕ್ಕೆ (ಎ) ಸೇರುತ್ತದೆ.

### ಎರಡನೆಯ ವಿಧಾನ

ಲಗ್ನಾಷ್ಟಮದ ಅಧಿಪತಿ ಗುರು.

ಸಪ್ತಮದಿಂದ ಅಷ್ಟಮದ ಅಧಿಪತಿ ಬುಧ.

ರಾಶಿಬಲದ ಪ್ರಕಾರ ಗುರುವು ಬುಧನಿಗಿಂತ ಪ್ರಬಲ.
ಗುರು ಕೇಂದ್ರದಲ್ಲಿದ್ದಾನೆ.
∴ ಆಯುರ್ದಾಯದ ಅವಧಿ = ಪೂರ್ಣಾಯು (ಬ).

**ಮೂರನೆಯ ವಿಧಾನ**

ಆತ್ಮಕಾರಕನಿಂದ ಅಷ್ಟಮದ ಅಧಿಪತಿ ಬುಧ.
ಆತ್ಮಕಾರಕನಿಂದ ಸಪ್ತಮಕ್ಕೆ ಅಷ್ಟಮದ ಅಧಿಪತಿ ಗುರು.
ಗುರು ಬುಧನಿಗಿಂತ ಹೆಚ್ಚು ಪ್ರಬಲ.
ಗುರುವೇ ಆತ್ಮಕಾರಕ. ಲಗ್ನದಿಂದ. ಕೇಂದ್ರದಲ್ಲಿದ್ದಾನೆ.
∴ ಆಯುರ್ದಾಯದ ಅವಧಿ = **ಪೂರ್ಣಾಯು** (ಇ).

ಆತ್ಮಕಾರಕನು ಲಗ್ನದಿಂದ ಸಪ್ತಮದಲ್ಲಿಲ್ಲ. ಆದಕಾರಣ ಯಾವ ತಿದ್ದುಪಾಡೂ ಇಲ್ಲ.

∴ ಜಾತಕವು ಎರಡನೆಯ ಮತ್ತು ಮೂರನೆಯ ವಿಧಾನಗಳ ಪ್ರಕಾರ ಪೂರ್ಣಾಯು ಪಂಗಡಕ್ಕೆ ಸೇರುತ್ತದೆ.

∴ ಕಕ್ಷವೃದ್ಧಿಯಾಗಲೀ ಕಕ್ಷಹ್ರಾಸವಾಗಲೀ ಇಲ್ಲ. ಪರ ವಿರೋಧ ಅಂಶಗಳು ಸಮತೂಕವಾಗಿರುತ್ತವೆ.

ವೃದ್ಧಿಯ ಪರವಾಗಿ : (1) ಆತ್ಮಕಾರಕ ಶುಭ.
(2) ಆತ್ಮಕಾರಕನು ಗುರುವೇ ಆಗಿದ್ದಾನೆ.
ಹ್ರಾಸದ ಪರವಾಗಿ : (1) ಲಗ್ನದಿಂದ ಅಷ್ಟಮಾಧಿಪತಿ ಆತ್ಮಕಾರಕ.
(2) ಲಗ್ನ ಮತ್ತು ಸಪ್ತಮ ಎರಡೂ ಪಾಪಿಗಳ ನಡುವೆ ಇವೆ.

## 119. ಟೀಕೆ

ಆಯುರ್ದಾಯ ನಿರ್ಣಯಕ್ಕೆ ಅನೇಕ ವಿಧಾನಗಳನ್ನು ಪ್ರಯೋಗಿಸುವಾಗ, ಜಾತಕದ ಸಾಧಾರಣ ಬಲಾಬಲಗಳನ್ನು ಯುಕ್ತವಾದಷ್ಟು ಮಟ್ಟಿಗೆ ಗಮನಿಸಬೇಕು. ಮಾದರಿ ಜಾತಕದಲ್ಲಿ ಆತ್ಮಕಾರಕನ ಸ್ಥಾನಪ್ರಾಬಲ್ಯವನ್ನು ಗಮನಿಸಿ. ಅವನು ಲಗ್ನದಿಂದ ಕೇಂದ್ರದಲ್ಲಿದ್ದಾನೆ. ಅವನಿರುವ ರಾಶಿಯ ಕಾರಣ ಅವನೇ ಅತ್ಯಂತ ಪ್ರಬಲ ಗ್ರಹ. ಆತ್ಮಕಾರಕನು ಅಷ್ಟು ಪ್ರಬಲನಾಗಿರುವ ಕಾರಣ, ಉಳಿದ ಪರಿಸ್ಥಿತಿಗಳು ಏನೇ ಆದರೂ ಜಾತಕ ವ್ಯಕ್ತಿಯು ಪೂರ್ಣಾಯುವಾಗಿರುತ್ತಾನೆ.

## 120. ಮರಣದ ಮಹಾ ದಶೆ

ಮರಣ ಸಂಭವನೀಯ ಕಾಲವನ್ನು ಮುನ್ನುಡಿಯುವ ಅನೇಕ ಕ್ರಮ ಗಳನ್ನು ಹೇಳಿದೆ. ಜೈಮಿನಿ ಹೇಳುವ ಯಾವ ದಶೆಯನ್ನಾದರೂ, ಚೆನ್ನಾಗಿ ಅಭ್ಯಸಿಸಿದರೆ ಪ್ರಯೋಗಿಸಬಹುದು ಎಂದು ಪಂಡಿತರು ಹೇಳುತ್ತಾರೆ. ಮರಣವನ್ನು ಸೂಚಿಸಲು ಶೂಲದಶೆಯನ್ನು ಪ್ರಯೋಗಿಸಬೇಕು ಎಂದು ಕೆಲವರು ಹೇಳುತ್ತಾರೆ. ಮಾರಕ ಕಾಲವನ್ನು ತಿಳಿಯುವುದಕ್ಕೆ ಮಾರಕ ದಶೆ ಮತ್ತು ಸ್ಥಿರದಶೆ ಎರಡನ್ನು ಮಾತ್ರ ಉಳಿಸತಕ್ಕದ್ದೆಂದು ಹೇಳುವ ಪಂಥವೂ ಇದೆ. ನಮ್ಮ ವೈಯಕ್ತಿಕ ಅಭಿಪ್ರಾಯದಲ್ಲಿ—ಇದನ್ನು ಯಥೋಚಿತ ವಾಗಿ ಗ್ರಹಿಸಬಹುದು. ಮಾರಕ ನಿಷ್ಕರ್ಷೆಗೆ ಸ್ಥಿರದಶೆ ಶೂಲದಶೆಗಳನ್ನು ಪ್ರಯೋಗಿಸಿದರೆ ಫಲಶ್ರುತಿಯು ಜಯಪ್ರದವಾಗುವ ಅವಕಾಶ ಹೆಚ್ಚು. ಮಾರಕ ನಿಷ್ಕರ್ಷೆಗೆ ನಾನು ಕೆಳಗಡೆ ಕೆಲವು ಆಯ್ಕೆಮಾಡಿದ ತತ್ವಗಳನ್ನು ಕೊಡುತ್ತೇನೆ.

(1) ಆತ್ಮಕಾರಕನಿಂದ ಸಪ್ತಮದಲ್ಲಿ ಅಥವಾ ಲಗ್ನದಿಂದ ಸಪ್ತಮದಲ್ಲಿ ಶನಿ, ರಾಹು ಅಥವಾ ಕೇತು ಇದ್ದರೆ, ಸಂಬಂಧಪಟ್ಟ ವಿಂಗಡಗಳ ಒಂದನೆಯ, ಎರಡನೆಯ ಅಥವಾ ಮೂರನೆಯ ಭಾಗಗಳಲ್ಲಿ ಮರಣ ಸಂಭವಿಸುತ್ತದೆ. ಅಂದರೆ ಆಯುರ್ದಾಯವು ಮಧ್ಯಾಯುವಾಗಿದ್ದು ಸಪ್ತಮದಲ್ಲಿ ಶನಿಯಿದ್ದರೆ, ಮಧ್ಯಾಯುವಿನ ಮೊದಲ ಭಾಗದಲ್ಲಿ ಸಾವುಂಟಾಗುತ್ತದೆ; ರಾಹು ಸಪ್ತಮ ದಲ್ಲಿದ್ದರೆ, ಮಧ್ಯಾಯುವಿನ ಎರಡನೇ ಭಾಗದಲ್ಲಿ ಸಾವುಂಟಾಗುತ್ತದೆ; ಕೇತುವು ಸಪ್ತಮದಲ್ಲಿದ್ದರೆ, ಮೂರನೆಯ ಭಾಗದಲ್ಲಿ ಸಾವುಂಟಾಗುತ್ತದೆ. ಇದು ಮೂರು ಸಂಜ್ಞೆಗಳಿಗೂ ಅನ್ವಯವಾಗುತ್ತದೆ.

(2) ಅಷ್ಟಮಕ್ಕೆ ತ್ರಿಕೋಣಗಳಾದ ರಾಶಿಗಳ ದಶೆಗಳಲ್ಲಿ ಸಾವು ಸಂಭವ.

(3) ಅಷ್ಟಮದಲ್ಲಿ ಶನಿಯಿದ್ದಾಗ, ಅಷ್ಟಮ ರಾಶಿಯ ದಶೆಯಲ್ಲಿ ಸಾವನ್ನು ನಿರೀಕ್ಷಿಸಬಹುದು. ಆದಕಾರಣ, ಇದು ನವಾಂಶ ದಶೆಗೆ ಅನ್ವಯಿ ಸುತ್ತದೆ.

(4) ಅಷ್ಟಮ ರಾಶಿಯು ಮಿಶ್ರ ಪ್ರಭಾವಕ್ಕೆ—ಅಂದರೆ ಶುಭ ಪಾಪ ಪ್ರಭಾವಕ್ಕೆ—ಒಳಗಾಗಿದ್ದರೆ, ಅಷ್ಟಮ ರಾಶಿಯ ದಶೆಯಲ್ಲಿ ಸಾವು ಸಂಭವ.

(5) ಜಾತಕನಿಗೆ ಗೊತ್ತಾದ ಆಯುರ್ದಾಯದ ಅವಧಿಗೆ ಒಳಪಟ್ಟಂತೆ ಮಾರಕ ದಶೆಯಲ್ಲಿ (ಸ್ಥಿರ ದಶೆಯಲ್ಲಿ) ಸಾವುಂಟಾಗುತ್ತದೆ. ಹೇಗೆಂದರೆ, ಒಬ್ಬನಿಗೆ ಪೂರ್ಣಾಯುರ್ದಾಯವಿದ್ದು ಪೂರ್ಣಾಯು ಅವಧಿಯು ಪ್ರಾರಂಭವಾದರೆ ಆಗ್ಗೆ ಸಾವುಂಟಾಗುವುದಿಲ್ಲ.

(6) ಯಾವ ರಾಶಿಯು ಪಾಪಿಗಳ ನಡುವೆ ಇದೆಯೋ ಮತ್ತು ಯಾವ ರಾಶಿಗೆ ಅಷ್ಟಮದಲ್ಲಿ ಮತ್ತು ಅದರಿಂದ ದ್ವಾದಶದಲ್ಲಿ ಪಾಪಿಗಳಿರುತ್ತಾರೋ ಆ ರಾಶಿಯ ದಶೆಯಲ್ಲಿ ಮರಣವು ಸಂಭವ.

(7) ಚಂದ್ರ ಶುಕ್ರರ ದೃಷ್ಟಿಯಲ್ಲದೆ ಇತರ ದೃಷ್ಟಿವಿಹೀನವಾದ ಅಷ್ಟಮ ಅಥವಾ ದ್ವಾದಶ ರಾಶಿಯ ದಶೆಯಲ್ಲಿ ಸಾವುಂಟಾಗಬಹುದು.

(8) ಲಗ್ನ, ಚಂದ್ರ, ಆತ್ಮಕಾರಕರಿಂದ ಅಷ್ಟಮದಲ್ಲಿ ಅಥವಾ ದ್ವಿತೀಯದಲ್ಲಿ ರುದ್ರನೋ ಪಾಪಿಗಳೋ ಇದ್ದರೆ, ಮಾರಕ ರಾಶಿ ದಶೆಗೆ ಮುಂಚಿನ ರಾಶಿ ದಶೆಯಲ್ಲಿ ಮರಣವುಂಟಾಗುತ್ತದೆ.

(9) ಸೂರ್ಯ ಶುಕ್ರರಿಂದ ಅಷ್ಟಮ ರಾಶಿಯ ದಶೆಯಲ್ಲೂ ಸಾವು ಸಂಭವ.

(10) ಆಯುರ್ದಾಯವು ಬ್ರಹ್ಮನಿಂದ ಮಹೇಶ್ವರನವರೆಗೆ (ಸ್ಥಿರ ದಶೆಯ ಪ್ರಕಾರ) ಬೆಳೆಯುತ್ತದೆ.

(11) ಮಹೇಶ್ವರನಿರುವ ರಾಶಿಯ (ಸ್ಥಿರ ದಶೆಯ ಪ್ರಕಾರ) ದಶೆಯಲ್ಲೂ ಸಾವು ಸಂಭವ. ಹಾಗೇ ಮಹೇಶ್ವರನಿಂದ ಅಷ್ಟಮದ ಅಧಿಪತಿಯಿರುವ ರಾಶಿಯಿಂದ ಪ್ರಥಮ ಪಂಚಮ ನವಮ ರಾಶಿಗಳ ಅಂತರ ದಶೆಗಳಲ್ಲೂ ಸಾಧ್ಯ.

(12) ಆತ್ಮಕಾರಕನಿಂದ ತೃತೀಯ, ಷಷ್ಠ, ಅಷ್ಟಮ ದ್ವಾದಶಗಳ ಅಧಿಪತಿಗಳ ಪೈಕಿ ಅತ್ಯಂತ ಪ್ರಬಲನು ಮಾರಕನಾಗುತ್ತಾನೆ. ಸಾವು ಅವನಿರುವ ರಾಶಿಯ ದಶೆಯಲ್ಲಿ ಒದಗುತ್ತದೆ.

(13) ಮೇಲಿನ ಪ್ರಕಾರ ಇಬ್ಬರು ಅಥವಾ ಮೂವರು ಅಧಿಪತಿಗಳು ಮಾರಕರಾದಾಗ, ಯಾರ ರಾಶಿದಶೆಯು (ಅವನಿರುವ ರಾಶಿಯ ದಶೆಯು) ಆಯುರ್ದಾಯದ ಅವಧಿಗೆ ಅನುಗುಣವಾಗಿರುತ್ತದೆಯೋ ಅವನನ್ನೇ ಆರಿಸಿಕೊಳ್ಳಿ. ಅಂದರೆ ಮೂರು ರಾಶಿಗಳು ಸಮಾನ ಪ್ರಾಬಲ್ಯವುಳ್ಳ ಮಾರಕ ರಾಶಿಗಳಾಗುತ್ತವೆ ಅನ್ನಿ. ಜಾತಕನು ಪೂರ್ಣಾಯುವಾಗಿರುತ್ತಾನೆ. ಪೂರ್ಣಾಯುರ್ದಾಯದ ಅವಧಿಗೆ ಮುಂಚೆ ಎರಡು ಗ್ರಹಗಳ ದಶೆ ಬರುತ್ತದೆ, ಅನ್ನಿ. ಇನ್ನೊಂದು ಅವಧಿಯಲ್ಲೇ ಬರುತ್ತದೆ ಎಂದಿಟ್ಟುಕೊಳ್ಳಿ.

ಆಗ, ಯಾವ ದಶೆಯು ಪೂರ್ಣಾಯು ಅವಧಿಯಲ್ಲಿ ಬರುತ್ತದೋ ಆ ದಶೆಯ ರಾಶಿಯು ಮಾರಕವಾಗುತ್ತದೆ.

## 121. ಮಾರಕ ದಶೆಯು ಉಪದಶೆಗಳು

(1) ಮಾರಕ ದಶೆಯ ಅವಧಿಯಲ್ಲಿ, ಆತ್ಮಕಾರಕನಿಂದ ಅಷ್ಟಮ, ತೃತೀಯ, ದ್ವಾದಶ ಅಧಿಪತಿಗಳ ಪೈಕಿ ಅತ್ಯಂತ ಪ್ರಬಲನಾದ ಗ್ರಹದ ಉಪ ದಶೆಯಲ್ಲಿ ಅಂದರೆ ಆ ಪ್ರಬಲ ಗ್ರಹವಿರುವ ರಾಶಿಯ ಉಪದಶೆಯಲ್ಲಿ ಸಾವುಂಟಾಗಬಹುದು.

(2) ರುದ್ರನು ಇರುವ ರಾಶಿಯ ಉಪದಶೆಯಲ್ಲೂ ಅಥವಾ

(3) ಮಾರಕ ರಾಶಿಯ ಅಧಿಪತಿಯ ಮತ್ತು ಮಾರಕ ರಾಶಿಯಿಂದ ಷಷ್ಠದ ಅಧಿಪತಿಯ ನವಾಂಶ ರಾಶಿಗಳ ಉಪದಶೆಗಳಲ್ಲೂ ಸಾವುಂಟಾಗ ಬಹುದು.

. ಕರ್ಕಾಟವು ಮಾರಕ ರಾಶಿ ಅನ್ನಿ. ಇದರ ಅಧಿಪತಿ ಮತ್ತು ಇದರಿಂದ ಷಷ್ಠದ ಅಧಿಪತಿ ಚಂದ್ರ ಮತ್ತು ಗುರು. ಅವರಿಬ್ಬರೂ ಮೀನ ನವಾಂಶ ದಲ್ಲೂ ತುಲಾ ನವಾಂಶದಲ್ಲೂ ಇದ್ದಾರೆನ್ನಿ. ಆಗ ಸಂಬಂಧಪಟ್ಟ ಮಾರಕ ದಶೆಯಲ್ಲಿ, ಮೀನ ತುಲಾ ಉಪದಶೆಗಳಲ್ಲಿ ಸಾವುಂಟಾಗಬಹುದು.

## 122. ಕೆಲವು ವಿನಾಯತಿಗಳು

ದ್ವಾರ ದಶೆ ಬಾಹ್ಯ ದಶೆಗಳು ಪೀಡಿತವಾಗಿದ್ದರೆ ಅವುಗಳ ನವಾಂಶ ರಾಶಿ ದಶೆಯಷ್ಟು ಅಂದರೆ 9 ವರ್ಷಗಳಷ್ಟು ಆಯುವೃದ್ಧಿಯಾಗುತ್ತದೆ. ಅಂಥ ಪರಿಸ್ಥಿತಿಯಲ್ಲಿ ಲಗ್ನಾಧಿಪತಿ ಅಷ್ಟಮಾಧಿಪತಿಗಳಿಂದ ತ್ರಿಕೋಣ ಗಳಾಗಿರುವ ರಾಶಿಗಳ ನವಾಂಶ ದಶೆಯಲ್ಲಿ ಸಾವು ಸಂಭವಿಸುತ್ತದೆ. ಅಥವಾ ಆ ಅಧಿಪತಿಯು ಇರುವ ರಾಶಿಯ ನವಾಂಶ ದಶೆಯಲ್ಲಿ ಸಾವು ಒದಗಿಸುತ್ತದೆ.

ಮೂವತ್ತನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಮಾರಕ ರಾಶಿಯನ್ನು ಗೊತ್ತುಹಚ್ಚಿ.**

ಅಂಕಗಳು 120 ಮತ್ತು 121ರಲ್ಲಿ ಕೊಟ್ಟಿರುವ ತತ್ವಗಳನ್ನು ಪ್ರಯೋಗಿಸಿದರೆ,

(4) ಅಷ್ಟಮಕ್ಕೆ ತ್ರಿಕೋಣ ರಾಶಿಗಳು ಧನುಸ್, ಮೇಷ ಮತ್ತು

ಸಿಂಹ. ಈ ಮೂರು ರಾಶಿಗಳ ಪೈಕಿ ಅತ್ಯಂತ ಪ್ರಬಲವಾದ ಧನುಸ್ ರಾಶಿಯು ದಶೆಯಲ್ಲಿ ಸಾವು ಸಂಭವಿಸುತ್ತದೆ (ಉದಾಹರಣೆ 18).

(5) ವೃಷಭದ ಇಕ್ಕೆಲಗಳಲ್ಲೂ ಪಾಪಿಗಳಿದ್ದಾರೆ. ಆದ್ದರಿಂದ ವೃಷಭವೂ ಮಾರಕ ದಶೆ. ಧನುಸ್ಸಿಗೆ ಅಷ್ಟಮದಲ್ಲಿ ಪಾಪಿ ಇದ್ದಾನೆ.

(6) ಸಾವು ಧನುಸ್ (ಅಷ್ಟಮ ರಾಶಿ) ದಶೆಯಲ್ಲೋ ಮೇಷ (ದ್ವಾದಶ ರಾಶಿ) ದಶೆಯಲ್ಲೋ ಒದಗಬಹುದು. ಆದರೆ ಮೇಷವು ದುರ್ಬಲ ಚಂದ್ರ ಮತ್ತು ಶುಕ್ರ ಇವರ ದೃಷ್ಟಿಯಲ್ಲದೆ ಇತರರ ದೃಷ್ಟಿಯಿಂದ ವಿಹೀನವಾಗಿಲ್ಲದುದರಿಂದ ಅಂದರೆ ಗುರು ಸೂರ್ಯ ಬುಧರ ದೃಷ್ಟಿಗೆ ಒಳಗಾಗಿರುವುದರಿಂದ, ಅದು ಮಾರಕವಾಗಲಾರದು.

ಧನುಸ್ ದೃಷ್ಟಿಗಳಿಂದ ವಿಹೀನವಾಗಿದೆ (ಶನಿಯ ದೃಷ್ಟಿ ವಿನಾಯಿಸಿ), ಆದರೆ ಶುಕ್ರ ಸಂಪರ್ಕ ಹೊಂದಿದೆ. ಆದಕಾರಣ ಅದಕ್ಕೆ ಮಾರಕ ಶಕ್ತಿ ಬರುತ್ತದೆ.

(7) ಕನ್ಯಾ ಕಟಕಗಳೂ ಮಾರಕ ರಾಶಿಗಳು.

(8) ಕುಂಭ ರಾಶಿಯಲ್ಲಿ ರುದ್ರ ಮಹೇಶ್ವರರಿರುವ ಕಾರಣ, ಅವೂ ಮಾರಕವಾಗಬಲ್ಲವು.

(9) ಆತ್ಮಕಾರಕನಿಂದ ತೃತೀಯಾಧಿಪತಿ (ಕುಜ), ಷಷ್ಠಾಧಿಪತಿ (ಚಂದ್ರ), ಅಷ್ಟಮಾಧಿಪತಿ (ಬುಧ) ಮತ್ತು ದ್ವಾದಶಾಧಿಪತಿ(ಶನಿ)—ಈ ಪೈಕಿ ಅತ್ಯಂತ ಪ್ರಬಲ ಬುಧ (16ನೆಯ ಉದಾಹರಣೆ). ಅವನು ಕುಂಭದಲ್ಲಿದ್ದಾನೆ. ಆದಕಾರಣ ಕುಂಭವು ಮಾರಕ ರಾಶಿಯಾಗಬಲ್ಲದು.

ಈ ರೀತಿಯಾಗಿ ಮುಂದೆ ಬರುವ ರಾಶಿಗಳು ಮಾರಕ ಶಕ್ತಿಯನ್ನು ಪಡೆದುಕೊಳ್ಳುತ್ತವೆ :—

(1) ಧನುಸ್
(2) ವೃಷಭ, ಧನುಸ್
(3) ಧನುಸ್
(4) ಕನ್ಯಾ ಮತ್ತು ಕಟಕ
(5) ಕುಂಭ
(6) ಕುಂಭ

ಕುಂಭವೇ ಅತ್ಯಂತ ಪ್ರಬಲ ರಾಶಿಯಾಗುವ ಕಾರಣ, ತನ್ನ ದಶೆಯಲ್ಲಿ ಅದು ಮಾರಕವಾಗುತ್ತದೆ. ಉಪದಶೆಗಳ ವಿಚಾರವಾಗಿ (ಅಂಕ 121), ಆತ್ಮ

ಕಾರಕನಿಂದ ಷಷ್ಠಾಧಿಪತಿ, ದ್ವಿತೀಯಾಧಿಪತಿ ದ್ವಾದಶಾಧಿಪತಿಗಳ ಪೈಕಿ ಅತ್ಯಂತ ಪ್ರಬಲನಾದವನು ಗುರು. ಆದಕಾರಣ ಗುರುವಿರುವ ಕುಂಭರಾಶಿಯು ಉಪದಶೆಯು ಧನುಸ್ಸಿನ ರಾಶಿಯು ಮಹಾದಶೆಯಲ್ಲಿ (ಸ್ಥಿರದಶೆಯ ಲೆಕ್ಕಾಚಾರದ ಪ್ರಕಾರ) ಮಾರಕವಾಗುತ್ತದೆ. ಧನುಸ್ ದಶೆ (ಸ್ಥಿರ ದಶೆ)ಯು ಜಾತಕನ 81ನೆಯ ವರ್ಷದಿಂದ ಪ್ರಾರಂಭವಾಗುತ್ತದೆ. ಕುಂಭ ಭುಕ್ತಿಯು ಜಾತಕನ 81ನೆಯ ವರ್ಷಾನಂತರ 6 ತಿಂಗಳು ಕಳೆದಾಗ ಒದಗುತ್ತದೆ. ಆತ ತನ್ನ 82ನೆಯ ವಯಸ್ಸಿನಲ್ಲಿ ಮೃತಪಟ್ಟನು.

ಸಿಂಹ. ಈ ಮೂರು ರಾಶಿಗಳ ಪೈಕಿ ಅತ್ಯಂತ ಪ್ರಬಲವಾದ ಧನುಸ್ ರಾಶಿಯ ದಶೆಯಲ್ಲಿ ಸಾವು ಸಂಭವಿಸುತ್ತದೆ (ಉದಾಹರಣೆ 18).

(5) ವೃಷಭದ ಇಕ್ಕೆಲಗಳಲ್ಲೂ ಪಾಪಿಗಳಿದ್ದಾರೆ. ಆದ್ದರಿಂದ ವೃಷಭವೂ ಮಾರಕ ದಶೆ. ಧನುಸ್ಸಿಗೆ ಅಷ್ಟಮದಲ್ಲಿ ಪಾಪಿ ಇದ್ದಾನೆ.

(6) ಸಾವು ಧನುಸ್ (ಅಷ್ಟಮ ರಾಶಿ) ದಶೆಯಲ್ಲೋ ಮೇಷ (ದ್ವಾದಶ ರಾಶಿ) ದಶೆಯಲ್ಲೋ ಒದಗಬಹುದು. ಆದರೆ ಮೇಷವು ದುರ್ಬಲ ಚಂದ್ರ ಮತ್ತು ಶುಕ್ರ ಇವರ ದೃಷ್ಟಿಯಲ್ಲದೆ ಇತರರ ದೃಷ್ಟಿಯಿಂದ ವಿಹೀನವಾಗಿಲ್ಲದುದರಿಂದ ಅಂದರೆ ಗುರು ಸೂರ್ಯ ಬುಧರ ದೃಷ್ಟಿಗೆ ಒಳಗಾಗಿರುವುದರಿಂದ, ಅದು ಮಾರಕವಾಗಲಾರದು.

ಧನುಸ್ ದೃಷ್ಟಿಗಳಿಂದ ವಿಹೀನವಾಗಿದೆ (ಶನಿಯ ದೃಷ್ಟಿ ವಿನಾಯಿಸಿ), ಆದರೆ ಶುಕ್ರ ಸಂಪರ್ಕ ಹೊಂದಿದೆ. ಆದಕಾರಣ ಅದಕ್ಕೆ ಮಾರಕ ಶಕ್ತಿ ಬರುತ್ತದೆ.

(7) ಕನ್ಯಾ ಕಟಕಗಳೂ ಮಾರಕ ರಾಶಿಗಳು.

(8) ಕುಂಭ ರಾಶಿಯಲ್ಲಿ ರುದ್ರ ಮಹೇಶ್ವರರಿರುವ ಕಾರಣ, ಅವೂ ಮಾರಕವಾಗಬಲ್ಲವು.

(9) ಆತ್ಮಕಾರಕನಿಂದ ತೃತೀಯಾಧಿಪತಿ (ಕುಜ), ಷಷ್ಠಾಧಿಪತಿ (ಚಂದ್ರ), ಅಷ್ಟಮಾಧಿಪತಿ (ಬುಧ) ಮತ್ತು ದ್ವಾದಶಾಧಿಪತಿ(ಶನಿ)—ಈ ಪೈಕಿ ಅತ್ಯಂತ ಪ್ರಬಲ ಬುಧ (16ನೆಯ ಉದಾಹರಣೆ). ಅವನು ಕುಂಭದಲ್ಲಿದ್ದಾನೆ. ಆದಕಾರಣ ಕುಂಭವು ಮಾರಕ ರಾಶಿಯಾಗಬಲ್ಲದು.

ಈ ರೀತಿಯಾಗಿ ಮುಂದೆ ಬರುವ ರಾಶಿಗಳು ಮಾರಕ ಶಕ್ತಿಯನ್ನು ಪಡೆದುಕೊಳ್ಳುತ್ತವೆ :—

(1) ಧನುಸ್

(2) ವೃಷಭ, ಧನುಸ್

(3) ಧನುಸ್

(4) ಕನ್ಯಾ ಮತ್ತು ಕಟಕ

(5) ಕುಂಭ

(6) ಕುಂಭ

ಕುಂಭವೇ ಅತ್ಯಂತ ಪ್ರಬಲ ರಾಶಿಯಾಗುವ ಕಾರಣ, ತನ್ನ ದಶೆಯಲ್ಲಿ ಅದು ಮಾರಕವಾಗುತ್ತದೆ. ಉಪದಶೆಗಳ ವಿಚಾರವಾಗಿ (ಅಂಕ 121), ಆತ್ಮ

ಕಾರಕನಿಂದ ಷಷ್ಠಾಧಿಪತಿ, ದ್ವಿತೀಯಾಧಿಪತಿ ದ್ವಾದಶಾಧಿಪತಿಗಳ ಪೈಕಿ ಅತ್ಯಂತ ಪ್ರಬಲನಾದವನು ಗುರು. ಆದಕಾರಣ ಗುರುವಿರುವ ಕುಂಭರಾಶಿಯ ಉಪದಶೆಯು ಧನುಸ್ಸಿನ ರಾಶಿಯ ಮಹಾದಶೆಯಲ್ಲಿ (ಸ್ಥಿರದಶೆಯ ಲೆಕ್ಕಾಚಾರದ ಪ್ರಕಾರ) ಮಾರಕವಾಗುತ್ತದೆ. ಧನುಸ್ ದಶೆ (ಸ್ಥಿರ ದಶೆ)ಯು ಜಾತಕನ 81ನೆಯ ವರ್ಷದಿಂದ ಪ್ರಾರಂಭವಾಗುತ್ತದೆ. ಕುಂಭ ಭುಕ್ತಿಯು ಜಾತಕನ 81ನೆಯ ವರ್ಷಾನಂತರ 6 ತಿಂಗಳು ಕಳೆದಾಗ ಒದಗುತ್ತದೆ. ಆತ ತನ್ನ 82ನೆಯ ವಯಸ್ಸಿನಲ್ಲಿ ಮೃತಪಟ್ಟನು.

# ಜಾತಕ ಕುರಿತ ನಿರ್ಣಯ

## 123. ಪೂರ್ವಭಾವಿ ಪರಿಶೀಲನೆಗಳು

ಜ್ಯೋತಿಷದ ಆಯುಕಟ್ಟಿನ ಸಂಗತಿ ಎಂದರೆ ಜಾತಕ ಕುರಿತು ನಿರ್ಣಯ ಮಾಡುವುದು. ಈ ದಿಸೆಯಲ್ಲಿ ಜೈಮಿನಿಯ ವಿಧಾನವು ವಿಶಿಷ್ಟವಾದುದು. ವಿವಿಧ ಅಧ್ಯಾಯಗಳಲ್ಲಿ ಚದುರಿಹೋಗಿರುವ ವಿವಿಧ ಭಾಗಗಳನ್ನು ಕುರಿತ ಗ್ರಹಸ್ಥಿತಿಗಳ ಸಂಗ್ರಹವನ್ನು ಇಲ್ಲಿ ಕೊಟ್ಟಿದ್ದೇನೆ.

## 124. ಕಾರಕಾಂಶ

ನಾವು ಈಗಾಗಲೇ ಅಂಕ 8ರಲ್ಲಿ, ಯಾವ ಗ್ರಹವು ಒಂದು ರಾಶಿಯಲ್ಲಿ ಅತ್ಯಂತ ಹೆಚ್ಚಿನ ಡಿಗ್ರಿಗಳನ್ನು ಪಡೆಯುತ್ತದೆಯೋ ಅದೇ ಆತ್ಮಕಾರಕ ಎಂದು ಕಂಡಿದ್ದೇವೆ. ಆತ್ಮಕಾರಕನಿರುವ ನವಾಂಶವೇ ಕಾರಕಾಂಶ.

## 125. ದೇಹಲಕ್ಷಣಗಳು

ಜೈಮಿನಿ ಸೂತ್ರಗಳಲ್ಲಿ ಎಲ್ಲೂ ಕೂಡ ಜನನ ಕಾಲದ ಲಗ್ನರಾಶಿಯು ಮೇರೆಗೆ ಜಾತಕನ ದೇಹಲಕ್ಷಣಗಳೂ ಶೀಲಸ್ವಭಾವಗಳೂ ಇರುತ್ತವೆಂದು ಹೇಳುವ ಸೂಚನೆಯು ಕಾಣಬರದಿದ್ದರೂ, ನಾವು ರಾಶಿಯ ಪ್ರಭಾವಕ್ಕೆ ಯುಕ್ತವಾದಷ್ಟು ಪ್ರಾಧಾನ್ಯ ನೀಡಬೇಕು. ದೇಹ ಲಕ್ಷಣಗಳು, ಮೈ ಬಣ್ಣ ಮುಂತಾದುವನ್ನು ಕಾರಕಾಂಶದ ಅಧಿಪತಿಯು, ನವಾಂಶಾಧಿಪತಿಯು ವರ್ಣದ ಲಗ್ನಾಧಿಪತಿಯ ಸ್ವಭಾವಕ್ಕೆ ಅನುಗುಣವಾಗಿ ತಿಳಿಯಬೇಕು—ವರ್ಣದ ಲಗ್ನಾಧಿಪತಿಯು ಮೈ ಬಣ್ಣವನ್ನು ಗೊತ್ತುಹಚ್ಚಲು ವಿಶೇಷ ಪ್ರಾಮುಖ್ಯ ವುಳ್ಳವನು. ಲಗ್ನದಲ್ಲಿರುವ, ನವಾಂಶ ಲಗ್ನ ವರ್ಣದ ಲಗ್ನಗಳಲ್ಲಿರುವ

ಮತ್ತು ಕಾರಕಾಂಶದಲ್ಲಿರುವ ಗ್ರಹಗಳು ಜಾತಕನಿಗೆ ತಮ್ಮ ತಮ್ಮ ಲಕ್ಷಣಗಳನ್ನು ನೀಡುತ್ತಾರೆ.

ಗ್ರಹಗಳ * ಬಣ್ಣಗಳನ್ನು ಸಾಧಾರಣವಾಗಿ ಪ್ರಚಲಿತವಿರುವ ಜ್ಯೋತಿಷ ತತ್ವಗಳು ಸೂಚಿಸುವ ಪ್ರಕಾರ ತೆಗೆದುಕೊಳ್ಳಬೇಕು. ಲಗ್ನ ನವಾಂಶ ಲಗ್ನ ವರ್ಣದ ಕಾರಕಾಂಶಗಳಲ್ಲಿ ಕೇತು–ಶನಿ ಜತೆಗಿದ್ದರೆ, ಮೈ ಬಣ್ಣ ಕೆಂಪು ; ರಾಹು–ಶನಿ—ಕಪ್ಪು ; ಶನಿ–ಶುಕ್ರ—ಕರಿಯ ಛಾಯೆ ; ಶನಿ–ಗುರು—ಚಿನ್ನದ ಬಣ್ಣ ; ಶನಿ–ಬುಧ—ತಿಳಿನೀಲಿ ; ಶನಿ–ಕುಜ—ರಕ್ತ ಸುವರ್ಣ ; ಶನಿ–ಚಂದ್ರ—ಬಿಳುಪು.

ಪ್ರಾಣಪದ (ಅಂಕ 59) ಕನ್ಯಾದಲ್ಲಿದ್ದರೆ, ಮೈಗೆ ಕೆಂಪು ಛಾಯೆ ಬರುತ್ತದೆ, ಕೋಮಲತೆಯುಂಟಾಗುತ್ತದೆ ; ಮಕರದಲ್ಲಿ ಕೆಂಚನೆಯ ಬಣ್ಣ ; ಸಿಂಹ—ಕುರೂಪ. ಲಗ್ನಾರೂಢ (ಅಂಕ 19) ದಿಂದ ಕೇತುವು ದ್ವಿತೀಯದಲ್ಲಿದ್ದರೆ, ವ್ಯಕ್ತಿ ಮುದಿಯಾಗಿ ಕಾಣುತ್ತಾನೆ. ಉಪಪದದಿಂದ † ಸಪ್ತಮದ ಆಧಿಪತಿಗೆ ದ್ವಿತೀಯದಲ್ಲಿ ಶನಿಯಿದ್ದರೆ, ಜಾತಕನು ತೀರ ಕುರೂಪಿಯಾಗುತ್ತಾನೆ. ಬುಧ–ಶುಕ್ರರು ದ್ವಿತೀಯದಲ್ಲೋ, ಪಂಚಮದಲ್ಲೋ ಇದ್ದರೆ ದವಡೆ ತುಟಿಗಳು ವಿಕಾರವಾಗಿರುತ್ತವೆ.

ಮೂವತ್ತೊಂದನೆಯ ಉದಾಹರಣೆ : **ಮೂದರಿ ಜಾತಕದಲ್ಲಿ ಜಾತಕನ ಮೈ ಲಕ್ಷಣವನ್ನು ನಿರ್ಣಯಿಸಿ.**

ಲಗ್ನಾಧಿಪತಿ ಶುಕ್ರ, ಕಾರಕಾಂಶಾಧಿಪತಿ ಕುಜ, ನವಾಂಶ ಲಗ್ನಾಧಿಪತಿ ಕುಜ, ವರ್ಣದ ಲಗ್ನಾಧಿಪತಿ ಶುಕ್ರ. ಕುಜ ಶುಕ್ರರು ಪ್ರಧಾನ ಗ್ರಹಗಳಾದ ಕಾರಣ, ಜಾತಕನು ಕುಜ ಶುಕ್ರರ ಲಕ್ಷಣಗಳನ್ನು ಪಡೆಯುತ್ತಾನೆ, ಅಂದರೆ ಬಿಳಿಯ ಮೈಬಣ್ಣ, ಆರೋಗ್ಯವಂತ ದೇಹಪ್ರಕೃತಿ, ದೊಡ್ಡ ಕಣ್ಣು, ಗೌರವಾನ್ವಿತವಾದ ನಿಲುವು, ಮೃದುತ್ವ, ಕೋಮಲತೆ.

## 126. ಶೀಲ ಮತ್ತು ಮನಸ್ಸು

ಪ್ರಾಣಪದ ಲಗ್ನವು ಕುಂಭವಾದಲ್ಲಿ ಜಾತಕನು ಆಷಾಢಭೂತಿ. ಚಂದ್ರ ರಾಹುಗಳು ಪಂಚಮದಲ್ಲಿದ್ದರೆ, ಅಥವಾ ಪಂಚಮವನ್ನು ವೀಕ್ಷಿಸಿದರೆ, ಆವನು

* ಸೂರ್ಯನಿಂದ ಶನಿಯವರೆಗೆ ಕೆಂಪು, ಬಿಳಿ,ಕೆಂಚನೆಯ ಬಣ್ಣ, ಹಸಿರು, ಹಳದಿ,ಮಿಶ್ರ ವರ್ಣಗಳು, ಕಪ್ಪು ಈ ಕ್ರಮದಲ್ಲಿ ಬಣ್ಣಗಳು ಸೂಚಿತವಾಗಿವೆ, ಬೃಹತ್ ಜಾತಕ 11.3.

† ಲಗ್ನದಿಂದ ದ್ವಾದಶಕ್ಕೆ ಯಾವುದು ಆರೂಢ ರಾಶಿಯಾಗುತ್ತದೋ ಅದೇ ಉಪಪದ. ಅಂದರೆ ಅತ 19ರ ಪ್ರಕಾರ ದ್ವಾದಶಕ್ಕೆ ಆರೂಢವನ್ನು ಕಂಡುಹಿಡಿಯಬೇಕು.

ಖಿನ್ನ, ವಿಷಣ್ಣ. ಲಗ್ನದಿಂದ ನವಮದಲ್ಲೋ ಆತ್ಮಕಾರಕನಿಂದ ನವಮದಲ್ಲೋ ಚಂದ್ರ ರಾಹುಗಳಿದ್ದರೆ, ಆ ವ್ಯಕ್ತಿ ಕೇಡಿಗ, ವಿಧ್ವಂಸಕಾರಿ. ಲಗ್ನವು ಕುಜ ವೀಕ್ಷಿತವಾದರೆ, ಚುರುಕು ಸಿಡುಕು ಉದ್ವೇಗ ಸ್ವಭಾವದವನಾಗುತ್ತಾನೆ. ಕಾರಕಾಂಶವು ಮೀನದಲ್ಲಿದ್ದರೆ ಪ್ರತಿಭಾನ್ವಿತನಾದ ಧರ್ಮಿಷ್ಠನಾಗುತ್ತಾನೆ. ಕೇತು ಕಾರಕಾಂಶ ಸೇರಿದರೆ ವ್ಯಕ್ತಿ ಕಪಟಿಯಾಗಿ ಪಾಪಕಾರ್ಯ ಮಾಡುತ್ತಾನೆ. ಸೂರ್ಯ ರಾಹುಗಳು ಕಾರಕಾಂಶಗತರಾಗಿ ಕುಜ ವೀಕ್ಷಿತರಾದರೆ, ಆ ವ್ಯಕ್ತಿ ವಿಧ್ವಂಸಕಾರಿಯಾಗುತ್ತಾನೆ. ಕಾರಕಾಂಶದಿಂದ ದಶಮವು ಬುಧನಿಂದ ಕೂಡಿರದೆ ಶುಭದೃಷ್ಟಿ ಪಡೆದಿದ್ದರೆ, ಅಂಥ ವ್ಯಕ್ತಿಗೆ ದೃಢಬುದ್ಧಿಯಿರುತ್ತದೆ. ಕಾರಕಾಂಶದಿಂದ ತೃತೀಯದಲ್ಲಿ ಪಾಪಿಗಳಿದ್ದರೆ, ಧೀರನಾಗುತ್ತಾನೆ. ಕಾರಕಾಂಶದಿಂದ ಪಂಚಮ ನವಮಗಳು ಪಾಪಯುತವಾಗಿ ಶುಭದೃಷ್ಟಿಗೆ ಒಳಗಾಗಿದ್ದರೆ, ಉದಾರ ಸ್ವಭಾವವುಂಟಾಗುತ್ತದೆ. ಕಾರಕಾಂಶದಲ್ಲೋ ಕಾರಕಾಂಶದಿಂದ ಪಂಚಮದಲ್ಲೋ ಶನಿಯಿದ್ದರೆ ಸಭಾಕಂಪವನ್ನು ಸೂಚಿಸುತ್ತವೆ. ಕಾರಕಾಂಶದಿಂದ ದ್ವಿತೀಯದಲ್ಲಿ ಕೇತುವಿದ್ದು ಪಾಪ ವೀಕ್ಷಿತನಾದರೆ, ವ್ಯಕ್ತಿಗೆ ವಾಕ್ ಸೌಲಭ್ಯವಿರುವುದಿಲ್ಲ ಅಥವಾ ಅಂಥ ವ್ಯಕ್ತಿ ಅಸ್ಪಷ್ಟವಾಗಿ ಮಾತಾಡುತ್ತಾನೆ. ಆತ್ಮಕಾರಕನನ್ನೋ ಲಗ್ನವನ್ನೋ ಪಂಚಮಾಧಿಪತಿಯು ವೀಕ್ಷಿಸಿದರೆ, ಜಾತಕನು ತುಂಬ ಬುದ್ಧಿವಂತನಾಗುತ್ತಾನೆ. ಲಗ್ನವನ್ನೋ (ಆತ್ಮಕಾರಕನನ್ನೋ) ಲಗ್ನದಿಂದ (ಆತ್ಮಕಾರಕನಿಂದ ಚತುರ್ಥದ ಅಧಿಪತಿಯು ನೋಡಿದರೆ ಆ ವ್ಯಕ್ತಿ ಸುಖಜೀವಿಯಾಗುತ್ತಾನೆ. ಲಗ್ನದಿಂದ (ಆತ್ಮಕಾರಕನಿಂದ) ದ್ವಾದಶದ ಅಧಿಪತಿಯು ಲಗ್ನವನ್ನೋ ಆತ್ಮಕಾರಕನನ್ನೋ ವೀಕ್ಷಿಸಿದರೆ, ವ್ಯಕ್ತಿಯು **ದಂದರ ಹಾಳಿಯಾಗುತ್ತಾನೆ.**

ಮೂವತ್ತೆರಡನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಮನಃಸ್ವಭಾವವನ್ನು ನಿರ್ಣಯಿಸಿ.**

ಲಗ್ನವು ಕುಜ ವೀಕ್ಷಿತ—ಚುರುಕು, ಉದ್ವೇಗ ಸ್ವಭಾವ. ಪಂಚಮಾಧಿಪತಿ ಬುಧ ಆತ್ಮಕಾರಕನ ಸಂಗಡ ಇದ್ದಾನೆ—ಜಾತಕನು ಬಾಲಪ್ರೌಢ, ಧೀಮಂತ. ಲಗ್ನದಿಂದ ಚತುರ್ಥಾಧಿಪತಿ ಸೂರ್ಯನು ಆತ್ಮಕಾರಕನ ಸಂಗಡ ಇರುವುದರಿಂದ, ವ್ಯಕ್ತಿ ಸುಖ ಜೀವನ ನಡೆಸಿದನು. ಆತ ಶೀಲವಂತನೆಂದು ಹೆಸರು ಪಡೆದಿದ್ದನು. ಆತನದು ಮಧುರವಾದ ನಡವಳಿಕೆ. ಕ್ಷಮಾಶೀಲ ಸ್ವಭಾವ, ಪ್ರಗತಿಪರವೂ ಜವಾಬ್ದಾರವೂ ಆದ ಚಳವಳಿಗಳ ಪ್ರಿಯ. ಲಗ್ನಾಧಿ

ಪತಿ ಆತ್ಮಕಾರಕನ ರಾಶಿಯಲ್ಲಿದ್ದು, ಕಾರಕಾಂಶವು ಪ್ರಬಲವಾಗಿ, ಪಂಚಮಾಧಿಪತಿಯು ಆತ್ಮಕಾರಕನ ಜೊತೆಗೂಡಿರುವುದನ್ನು ಗಮನಿಸಿ.

## 127. ಆರ್ಥಿಕ ಸ್ಥಿತಿಗತಿ

ಜಾತಕದ ಸಾಮಾನ್ಯವಾದ ಬಲಾಬಲಗಳಿಂದಲೂ ಸಾಧಾರಣವಾದ ಜ್ಯೋತಿಷಿಕ ತತ್ತ್ವಗಳನ್ನು ಪ್ರಯೋಗಿಸಿ ನೋಡುವುದರಿಂದಲೂ, ವ್ಯಕ್ತಿಯ ಆರ್ಥಿಕ ಅರ್ಹತೆಯನ್ನು ನಿರ್ಣಯಿಸಬೇಕು.

ಲಗ್ನಾರೂಢದಿಂದ ಏಕಾದಶದಲ್ಲಿ ಉಚ್ಚ ಅಥವಾ ಮಿತ್ರ ಗ್ರಹಗಳಿದ್ದರೆ, ಅಗಾಧವಾದ ಸಂಪತ್ತು ಉಂಟಾಗುತ್ತದೆ. ಏಕಾದಶದಲ್ಲಿರುವ ಗ್ರಹ ಅಥವಾ ಗ್ರಹಗಳು ಶುಭವೋ ಪಾಪವೋ ಆಗಿರುವುದಕ್ಕೆ ಅನುಸಾರವಾಗಿ ವ್ಯಕ್ತಿಯ ಸಂಪಾದನೆಯು ಸಕ್ರಮವೋ ಅಕ್ರಮವೋ ಆಗಿರುತ್ತದೆ. ಆರೂಢಲಗ್ನವು ಶುಭಸಂಬಂಧಿಯೋ ಶುಭದೃಷ್ಟಿಯುತವೋ ಆಗಿದ್ದರೆ, ಜಾತಕನು ಧನಿಕನಾಗುತ್ತಾನೆ. ಲಗ್ನಾರೂಢದಿಂದ ದ್ವಿತೀಯದಲ್ಲಿ ಶುಕ್ರ, ಚಂದ್ರ, ಗುರು ಇದ್ದರೆ ಗಮನಾರ್ಹವಾದಷ್ಟು ಧನವಿರುತ್ತದೆ. ಸಪ್ತಮದ ಆರೂಢ ರಾಶಿಯು ಲಗ್ನಾರೂಢದಿಂದ ಕೇಂದ್ರವೋ ಕೋನವೋ ತೃತೀಯವೋ ಏಕಾದಶವೋ ಆಗಿದ್ದರೆ ವ್ಯಕ್ತಿಯು ಬೇಕಾದಷ್ಟು ಹಣ ಸಂಪಾದಿಸಿ, ಒಳ್ಳೆ ಆಸ್ತಿ ಕೂಡಿಸುತ್ತಾನೆ. ಸಪ್ತಮದಿಂದ ಆರೂಢರಾಶಿಯು ಲಗ್ನಾರೂಢದಿಂದ ಷಷ್ಠ ಅಷ್ಟಮ ದ್ವಾದಶ ರಾಶಿಗಳಲ್ಲಿ ಬಿದ್ದರೆ ಧನಾರ್ಜನೆಗೆ ಕಷ್ಟ, ದಾರಿದ್ರ್ಯ ಪ್ರಾಪ್ತಿ. ಲಗ್ನಾರೂಢವೂ (ಅಥವಾ ಲಗ್ನವೂ) ಸಪ್ತಮದ ಆರೂಢವೂ (ಅಥವಾ ಸಪ್ತಮವೂ) ಪಾಪಾರ್ಗಳಗಳಿಗೆ ಈಡಾಗಿದ್ದರೆ (ಅಂಕಗಳು 44, 45 ನೋಡಿ) ಅಥವಾ ಶುಭಾರ್ಗಳ ಪಡೆದಿದ್ದರೆ ಅಗಾಧ ಹಣವನ್ನು ಸಂಪಾದಿಸುತ್ತಾನೆ. ಆತ್ಮಕಾರಕನಿಂದ (ಅಥವಾ ಲಗ್ನದಿಂದ) ಅಷ್ಟಮದ ಅಧಿಪತಿಯು ಆತ್ಮಕಾರಕನನ್ನು (ಅಥವಾ ಲಗ್ನವನ್ನು) ನೋಡಿದರೆ, ಬಡತನವುಂಟಾಗುತ್ತದೆ.

ಕಾರಕಾಂಶದಿಂದ ನವಮವು ರಾಹುಯುಕ್ತವಾಗಿದ್ದರೆ, ಕೆಟ್ಟ ಚಾಳಿಯ ಜೂಗಸರ ಸಹವಾಸದಿಂದ ಸಂಪತ್ತು ನಾಶವಾಗುತ್ತದೆ. ಲಗ್ನಾರೂಢದಿಂದ ದ್ವಿತೀಯವು ಶುಭದಿಂದ ಕೂಡಿದ್ದರೆ ಅಥವಾ ಶುಭದೃಷ್ಟಿಯಿಂದ ಕೂಡಿದ್ದರೆ ಅಥವಾ ಲಗ್ನಾರೂಢದ ಅಧಿಪತಿಯಿಂದಲೋ ಅಥವಾ ಯೋಗಕಾರಕ ಗ್ರಹಗಳಿಂದಲೋ ಕೂಡಿದ್ದರೆ ಅಥವಾ ಅವರ ದೃಷ್ಟಿಗೊಳಗಾಗಿದ್ದರೆ (ಅಂಕ 139 ನೋಡಿ), ಒಳ್ಳೆ ಆರ್ಥಿಕ ಅದೃಷ್ಟ ಕುದುರುತ್ತದೆ. ಆರ್ಥಿಕ ಸಂಪದಕ್ಕೆ

ಅತ್ಯುತ್ಕೃಷ್ಟವಾದ ಗ್ರಹಸ್ಥಿತಿ ಎಂದರೆ ಆತ್ಮಕಾರಕನಿಗೂ (ಅಥವಾ ಆತ್ಮಕಾರಕ ರಾಶಿಯ ಅಧಿಪತಿಗೂ) ಮತ್ತು ಆತ್ಮಕಾರಕನಿಂದ ದ್ವಿತೀಯಾಧಿಪತಿಗೂ ದೃಷ್ಟಿ ಅಥವಾ ಸಂಬಂಧ ಉಂಟಾಗಿರುವುದು.

ಮೂವತ್ತಮೂರನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಆರ್ಥಿಕ ಸಂಪದದ ಸಂಭವಗಳನ್ನು ನಿರ್ಣಯ ಮಾಡಿ.**

ಲಗ್ನಾರೂಢವಾದ ಕರ್ಕಾಟಕಕ್ಕೆ ಕುಜನ ಅರ್ಗಳವಿದೆ. ಆದರೆ ದಶಮದಲ್ಲಿ ಚಂದ್ರನಿರುವ ಕಾರಣ ಅದು ಪರಿಹಾರವಾಗುತ್ತದೆ. ಲಗ್ನಕ್ಕೆ ಶನಿ ಉಂಟುಮಾಡುವ ಅರ್ಗಳವು ದ್ವಾದಶದಲ್ಲಿ ಚಂದ್ರ ರಾಹುಗಳಿರುವುದರಿಂದ ನಿವಾರಣೆಯಾಗುತ್ತದೆ. ಸಪ್ತಮಕ್ಕೆ ಶುಭಾರ್ಗಳಗಳಿದ್ದು, ಈ ಅರ್ಗಳಗಳಿಗೆ ಪ್ರತಿರೋಧಕವಿಲ್ಲ. ಲಗ್ನಾರೂಢದಿಂದ ದ್ವಿತೀಯವು ಲಗ್ನರೂಢಾಧಿಪತಿ ಚಂದ್ರನಿಂದ (ಮತ್ತು ರಾಹುವಿನಿಂದ) ವೀಕ್ಷಿತವಾಗಿದೆ. ಆತ್ಮಕಾರಕನಿಂದ ದ್ವಿತೀಯವು ಆತ್ಮಕಾರಕ ರಾಶಿಯ ಅಧಿಪತಿ ಶನಿಯಿಂದ ವೀಕ್ಷಿತವಾಗಿದೆ. ಆದಕಾರಣ, ಈ ವ್ಯಕ್ತಿಯ ಆರ್ಥಿಕ ಪರಿಸ್ಥಿತಿಯು ತುಂಬ ಚೆನ್ನಾಗಿತ್ತು. ಆರೂಢ ಲಗ್ನವು ಆತ್ಮಕಾರಕನೂ ನೈಸರ್ಗಿಕ ಶುಭನೂ ಆದ ಗುರುವಿನ ದೃಷ್ಟಿಯನ್ನೂ ಆರೂಢ ಲಗ್ನದಿಂದ ದ್ವಿತೀಯಾಧಿಪತಿಯಾದ ಸೂರ್ಯನ ದೃಷ್ಟಿಯನ್ನೂ ಪಡೆದಿರುವುದು ಗಮನಾರ್ಹ. ಸಪ್ತಮದ ಆರೂಢವು ಲಗ್ನಾರೂಢದಿಂದ ತೃತೀಯದಲ್ಲಿರುವುದೂ ಗಮನಾರ್ಹವೇ ಈ ವ್ಯಕ್ತಿ ಯಥೇಚ್ಛವಾಗಿ ಸಂಪಾದಿಸಿದನು. ಆತ್ಮಕಾರಕನಿಂದ ಅಷ್ಟಮದ ಅಧಿಪತಿ ಬುಧನು ಆತ್ಮಕಾರಕನೊಡನೆಯೇ ಇದ್ದಾನೆ. ಬಹುಶಃ ಈ ಕಾರಣದಿಂದ ಆ ವ್ಯಕ್ತಿ ತನ್ನ ಸಂಪಾದನೆಯನ್ನೆಲ್ಲಾ ವ್ಯಯಮಾಡಿದನು.

## 128. ಆರೋಗ್ಯ ಮತ್ತು ರೋಗ ರುಜಿನ

ಯಾವ ಜಾತಕನ ಅಷ್ಟಮವನ್ನು ನವಮಾಧಿಪತಿಯು ವೀಕ್ಷಿಸುತ್ತಾನೋ ಅವನು ಸಾಧಾರಣವಾಗಿ ಆರೋಗ್ಯವಂತನಾಗಿರುತ್ತಾನೆ. ರಾಶಿಗಳು ಸೂಚಿಸುವ ಅಂಗಾಂಗಗಳು ಆಯಾ ರಾಶಿಗಳಿಗಿರುವ ಶುಭ ಅಥವಾ ಪಾಪಯುತಿ ಅಥವಾ ದೃಷ್ಟಿಗಳಿಗೆ ಅನುಗುಣವಾಗಿ ಬೆಳವಣಿಗೆ ಹೊಂದಿರುತ್ತವೆ ಅಥವಾ ಹೊಂದಿರುವುದಿಲ್ಲ. ಜೈಮಿನಿ ಪ್ರಕಾರ, ಲಗ್ನವೂ ಇತರೇ ಭಾವಗಳೂ ಅನುಕ್ರಮವಾಗಿ ತಲೆ, ಮುಖ, ಕತ್ತು, ಕೈಗಳು, ಹೊಟ್ಟೆ, ಜಘನ, ಪೃಷ್ಠ, ಜನನಾಂಗಗಳು, ಕಾಲುಗಳು, ಕಣ್ಣು, ಕಿವಿ ಇವನ್ನೆಲ್ಲಾ ಸೂಚಿಸುತ್ತವೆ. ಇವೆರಡರಲ್ಲಿ

ಯಾವುದು ಪ್ರಬಲವೋ ಅದು ದೇಹಸೂಚಕ. ಲಗ್ನ ಚಂದ್ರರಲ್ಲಿ ಪ್ರಬಲ ವಾದುದು ಹೃದಯಸೂಚಕ. ದೇಹಕ್ಕೆ ಊನವೂ ಬದುಕಿನ ಉತ್ತರ ಭಾಗದಲ್ಲಿ ಒದಗುತ್ತದೆ. ಆತ್ಮಕಾರಕನಿರುವ ನವಾಂಶವು (ಕಾರಕಾಂಶ) ವಿಶಿಷ್ಟವಾದ ತೊಂದರೆಗಳನ್ನೂ ಅಪಾಯಗಳನ್ನೂ ಸೂಚಿಸುತ್ತದೆ.

ವಿವಿಧ ನವಾಂಶಗಳಲ್ಲಿ ಆತ್ಮಕಾರಕ ಇರುವುದರಿಂದ ಉಂಟಾಗುವ ಫಲಗಳು ಹೀಗಿವೆ :

ಮೇಷ :– ಇಲಿ ಬೆಕ್ಕು ಮುಂತಾದ ಪ್ರಾಣಿಗಳಿಂದ ಭಯ. ವೃಷಭ:– ಗೂಳಿ ಕುದುರೆ ಮುಂತಾದ ಚತುಷ್ಪಾದ ಪ್ರಾಣಿಗಳಿಂದ ಭಯ. ಮಿಥುನ:–ಪದೇ ಪದೇ ಚರ್ಮರೋಗ, ಬೊಜ್ಜು ಮೈ. ಕರ್ಕಾಟಕ :– ನೀರಿನ ಮೂಲಗಳಿಂದ ಅಪಾಯ, ಕುಷ್ಠದಂಥ ಖಾಯಿಲೆಗಳು. ಸಿಂಹ:– ನಾಯಿಯೇ ಮುಂತಾ ದುವುಗಳಿಂದ ಭೀತಿ, ಕನ್ಯಾ :– ಬೆಂಕಿಯಿಂದ ಭೀತಿ, ಚರ್ಮವ್ಯಾಧಿ, ಬೊಜ್ಜು. ತುಲಾ ವೃಶ್ಚಿಕ :– ಪ್ರಾಣಿಗಳಿಂದ, ಹುಳುಗಳಿಂದ, ಹಾವು ಮುಂತಾದುವು ಗಳಿಂದ ಭಯ. ಧನುಸ್ :– ವಾಹನ ಅಪಘಾತ, ಎತ್ತರ ಸ್ಥಳಗಳಿಂದ ಪತನ. ಮಕರ :– ಮೀನು ತಿಮಿಂಗಿಲ ಜಾತಿಯಿಂದ ಭಯ, ಕಾಡು ಪ್ರಾಣಿಗಳು ಸ್ತ್ರೀಯರು ಭೂತಗಳೇ ಮುಂತಾದುವುಗಳಿಂದ ಭೀತಿ. ಕುಂಭ:– ಮಾನಸಿಕ ಪಲ್ಲಟ, ನಿದ್ರಾಹಾನಿ. ಮೀನ :– ಜಲರೋಗಗಳು, ಜಲೋದರ, ಕಾಲೂತ.

ಆತ್ಮಕಾರಕನು ಪಾಪಯುತಿ, ಪಾಪ ದೃಷ್ಟಿಗಳಿಂದ ವಿಮುಕ್ತನಾಗಿದ್ದರೆ, ವ್ಯಕ್ತಿಯು ಸಾಧಾರಣವಾಗಿ ಆರೋಗ್ಯಶಾಲಿಯಾಗಿರುತ್ತಾನೆ. ಚಂದ್ರನು ಕಾರಕಾಂಶದಲ್ಲಿದ್ದು ಕುಜ ವೀಕ್ಷಿತನಾದರೆ, ವ್ಯಕ್ತಿಯು **ಜಾಡ್ಯಜಾಲದಿಂದ** ನರಳುತ್ತಾನೆ. ಮುಂದಿನ ಗ್ರಹಸ್ಥಿತಿಗಳು ವ್ಯಕ್ತಿಯು ನರಳುವ ವ್ಯಾಧಿಗಳನ್ನು ಸೂಚಿಸುತ್ತವೆ. ವ್ಯಾಧಿಯು ಎಷ್ಟು ಉಲ್ಬಣ ಎಂಬುದನ್ನು ಅರಿಷ್ಟಗಳಿಗೆ ಒಳಗಾದ ಗ್ರಹಗಳಿಂದಲೂ ಉಪಶಮನವನ್ನು ಶುಭದೃಷ್ಟಿಗಳಿಂದಲೂ ನಿರ್ಣಯಿಸಬಹುದು :

(1) ಅಂಡವಾಯು ಅಥವಾ ಅಂತ್ರವೃದ್ಧಿ (**Hernia**) : ಕಾರಕಾಂಶಕ್ಕೆ ಗುಳಿಕಾ ಸಂಬಂಧ ಮತ್ತು ಬುಧ ದೃಷ್ಟಿ.

(2) ಕಿವಿಯ ರೋಗಗಳು : ಕೇತುಯುತವಾದ ಕಾರಕಾಂಶಕ್ಕೆ ಪಾಪ ಸಂಬಂಧ, ದೃಷ್ಟಿ.

(3) ಬಿಳಿ ತೊನ್ನು : ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರ, ಶುಕ್ರ ವೀಕ್ಷಿತ.

(4) ಕರಿ ತೊನ್ನು : ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರ, ಕೇತು ವೀಕ್ಷಿತ.

(5) ಕ್ಷಯ : ಕಾರಕಾಂಶದಿಂದ ಚತುರ್ಥದಲ್ಲಿ ಅಥವಾ ಪಂಚಮದಲ್ಲಿ ಕುಜ ಮತ್ತು ರಾಹು, ಚಂದ್ರನು ಕುಜನನ್ನು ನೋಡಿದರೆ, ಕ್ಷಯವು ವಾಸಿ ಯಾಗುವುದಿಲ್ಲ.

(6) ಮರ್ಮಾಂಸ, ವ್ರಣಗಳು : ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರ, ಸ್ಫೋಟಗಳು, ಕುರುಗಳು ಮತ್ತು ಇತರೇ ಚರ್ಮರೋಗಗಳೂ ಉಂಟಾಗುತ್ತವೆ.

(7) ಜಲೋದರ : ಕಾರಕಾಂಶದಿಂದ ಚತುರ್ಥದಲ್ಲಿ ಕೇತು.

(8) ಲಗ್ನಾರೂಢದಿಂದ ಸಪ್ತಮದಲ್ಲಿ ರಾಹು ಅಥವಾ ಕೇತು ಇದ್ದರೆ, ಜಠರ ವ್ಯಾಧಿಗಳುಂಟಾಗುತ್ತವೆ. ಮುಖ್ಯವಾದ ಸೂಚಕಗಳೆಂದರೆ ಲಗ್ನ, ಆತ್ಮಕಾರಕನಿರುವ ರಾಶಿ, ಕಾರಕಾಂಶ ಮತ್ತು ಈ ಸ್ಥಾನಗಳಿಂದ ಷಷ್ಠ ಭಾವಗಳು. ಸಾಧಾರಣವಾಗಿ, ಆತ್ಮಕಾರಕ ರಾಶಿಯಿಂದಲೂ ಕಾರಕಾಂಶ ದಿಂದಲೂ ಷಷ್ಠಭಾವವು ಪೀಡಿತವಾಗಿದ್ದರೆ, ಲಗ್ನದಿಂದ ಷಷ್ಠಭಾವವು ಪೀಡಿತವಾದಾಗ ಉಂಟಾಗುವುದಕ್ಕಿಂತ ಹೆಚ್ಚು ಪ್ರಮಾದಕಾರಿಯಾದ ಪರಿಣಾಮಗಳು ಉಂಟಾಗುತ್ತವೆ. ಮೇಲೆ ಸೂಚಿಸಿರುವ ಸ್ಥಾನಗಳಿಂದ ಯಾವು ದರ ಷಷ್ಠಭಾವವು ಹೆಚ್ಚುಕಡಿಮೆ ಪ್ರಮಾದಕಾರಿ ಎಂಬುದನ್ನು ಗಮನಕ್ಕೆ ತೆಗೆದುಕೊಳ್ಳಬೇಕು.

ಮೂವತ್ತನಾಲ್ಕನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ವ್ಯಕ್ತಿಯ ಆರೋಗ್ಯ ಸ್ವರೂಪ ಎಂಥದು ನಿರ್ಣಯಿಸಿ.**

ಅಷ್ಟಮವು ನವಮಾಧಿಪತಿ ಶನಿಯಿಂದ ವೀಕ್ಷಿತ: ಜಾತಕನು ಸಾಧಾರಣ ವಾಗಿ ಆರೋಗ್ಯವಂತನೇ ಆಗಿದ್ದನು. ಕಾರಕಾಂಶದಿಂದ ಷಷ್ಠದಲ್ಲಿ ಚಂದ್ರ ನಿದ್ದಾನೆ ಮತ್ತು ಕಾರಕಾಂಶದಿಂದ ಪಂಚಮದ ಅಧಿಪತಿ ಶುಭರಾಶಿಯಲ್ಲಿ ದ್ದಾನೆ. ಆತ್ಮಕಾರಕನಿಂದ ಷಷ್ಠವು ಬುಧ ಮತ್ತು ಆತ್ಮಕಾರಕ ಗುರು ಇವರ ವೀಕ್ಷಣಕ್ಕೆ ಒಳಗಾಗಿದ್ದಾನೆ. ಜಾತಕನಿಗೆ ಯಾವ ಪ್ರಮಾದವಾದ ರೋಗವೂ ಬಂದಿರಲಿಲ್ಲ. ಆತ್ಮಕಾರಕನಿಂದ ಸಪ್ತಮವು ಇಬ್ಬರು ಪಾಪಿಗಳಾದ ಕುಜ ಕೇತು ಗಳನ್ನು ಪಡೆದಿವೆ. ಸಪ್ತಮವು ಪಾಪಗಳನ್ನು ಸೂಚಿಸುತ್ತದೆ. ತುಲಾರಾಶಿ (ಸ್ಥಿರ) ದಶೆಯಲ್ಲಿ ಆತನ ಪಾದವು ಊದಿಕೊಂಡಿತ್ತು. ಸಾಯುವತನಕ ಹಾಗೇ ಇತ್ತು.

## 129. ಶಿಕ್ಷಣ ಪ್ರತೀಕ್ಷೆ

ಪರಾಶರರ ಪ್ರಕಾರ, ಶಿಕ್ಷಣವನ್ನು ಚತುರ್ಥದಿಂದ ತಿಳಿಯಬೇಕು. ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಜೈಮಿನಿಯ ವಿಚಾರವು ಸರ್ವಗ್ರಾಹ್ಯವಾಗಿಲ್ಲ, ವಿವಿಧ ವಿದ್ಯಾಶಾಖೆಗಳಲ್ಲಿ ಪರಿಣತಿಯನ್ನು ಸೂಚಿಸುವ ಹಲಕೆಲವು ಗ್ರಹ ಸ್ಥಿತಿಗಳನ್ನು ಜೈಮಿನಿ ಕೊಡುತ್ತಾನೆ. ವಾಚಕರು ಅವನ್ನು ತಮಗೆ ಸರಿ ಯೆಂದು ತೋರಿದಂತೆ ಉಪಯೋಗಿಸಬಹುದು. ಗುರುವು ಕಾರಕಾಂಶದಲ್ಲಿ ಅಥವಾ ಅದರಿಂದ ಪಂಚಮದಲ್ಲಿ ಇದ್ದರೆ, ವ್ಯಾಕರಣ ವೇದ ವೇದಾಂಗಗಳಲ್ಲಿ ಪರಿಣತಿಯನ್ನು ಕೊಡುತ್ತಾನೆ. ಕಾರಕಾಂಶ ಅಥವಾ ಅದರ ಪಂಚಮದಲ್ಲಿ ಬುಧನಿದ್ದರೆ, ಮೀಮಾಂಸ ಜ್ಞಾನ ಚೆನ್ನಾಗಿರುತ್ತದೆ. ಕಾರಕಾಂಶದಲ್ಲಿ ಅಥವಾ ಅದರಿಂದ ಪಂಚಮದಲ್ಲಿ ಕುಜನಿದ್ದರೆ, ಉಚ್ಚ ನ್ಯಾಯ ಶಿಕ್ಷಣ ದೊರೆಯುತ್ತದೆ. ಚಂದ್ರನು ಕಾರಕಾಂಶದಲ್ಲೋ ಅದರಿಂದ ಪಂಚಮದಲ್ಲೋ ಇದ್ದರೆ, ಸಂಗೀತದ ಪರಿಣತಿಯನ್ನೂ ಸಾಹಿತ್ಯದಲ್ಲಿ ಪಾಂಡಿತ್ಯವನ್ನೂ ಕೊಡುತ್ತಾನೆ. ಕೇತು ಕಾರಕಾಂಶದಲ್ಲೋ ಅದರಿಂದ ಪಂಚಮದಲ್ಲೋ ಇದ್ದರೆ ಗಣಿತಶಾಸ್ತ್ರ ದಲ್ಲಿ ಪರಿಣತಿಯನ್ನು ಕೊಡುತ್ತಾನೆ. ಮೇಲೆ ಹೇಳಿರುವ ಗ್ರಹಸ್ಥಿತಿಗಳಿಗೆ ಗುರುವಿನ ದೃಷ್ಟಿಯಿದ್ದರೆ, ಜಾತಕನು ಸರ್ವತೋಮುಖಿ ಪ್ರತಿಭಾನ್ವಿತ ನಾಗುತ್ತಾನೆ.

ಮೂವತ್ತೈದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಶಿಕ್ಷಣ ಪ್ರತೀಕ್ಷೆಯ ನಿರ್ಣಯ ಮಾಡಿ.**

ಕಾರಕಾಂಶದಿಂದ ಪಂಚಮದಲ್ಲಿ ಚಂದ್ರನಿದ್ದು ಬುಧನ ವೀಕ್ಷಣವನ್ನು ಪಡೆದಿದ್ದಾನೆ, ಜಾತಕನಿಗೆ ಸಾಹಿತ್ಯದಲ್ಲಿ ಮಹತ್ತರವಾದ ಪಾಂಡಿತ್ಯವಿತ್ತು ; ಆತ ಸಂಗೀತಪ್ರೇಮಿ. ಆತ್ಮಕಾರಕನ ಸಂಗಡ ಪಂಚಮಾಧಿಪತಿಯು ಇರುವು ದನ್ನು ಗಮನಿಸಿ. ಪರಾಶರ ವಿಧಾನದಿಂದ ನಿರ್ಣಯಿಸಿದರೆ ಶಿಕ್ಷಣ ಭಾವವು ತುಂಬ ಪ್ರಬಲವಾಗಿದೆ. ಚತುರ್ಥ ಪಂಚಮ ಅಧಿಪತಿಗಳಿಂದಲೂ ಗುರುವಿ ನಿಂದಲೂ ವೀಕ್ಷಣ ದೃಷ್ಟಿಯನ್ನು ಪಡೆದಿವೆ.

## 130. ತಂದೆ ತಾಯಿಗಳು

ಪಿತೃಕಾರಕ ಮಾತೃಕಾರಕರನ್ನು ಅಂಕ 11ರ ಮೇರೆಗೆ ನಿರ್ಣಯಿಸಬೇಕು. ಆರೂಢ ಲಗ್ನದಿಂದಲೂ ಮಾತೃಕಾರಕನಿಂದಲೂ ಚತುರ್ಥ ಭಾವವು ಬಲವಾಗಿ ದ್ದರೆ, ದೀರ್ಘಾಯುವಾದ ಒಳ್ಳೆಯ ತಾಯಿಯ ಭಾಗ್ಯವುಂಟಾಗುತ್ತದೆ. ಪಿತೃ

ಕಾರಕನೂ ಆರೂಢಲಗ್ನದಿಂದ ನವಮವೂ ಪೀಡಿತವಾಗದೆ ಇದ್ದರೆ, ತಂದೆಯು ದೀರ್ಘಾಯುವಾಗಿರುತ್ತಾನೆ.

## 131. ಸೋದರ ಸೋದರಿಯರು

ಉಪಪಾದದಿಂದ ತೃತೀಯವು ತಮ್ಮಂದಿರು ತಂಗಿಯರನ್ನೂ ಉಪಪದದಿಂದ ಏಕಾದಶವು ಅಣ್ಣಂದಿರು ಅಕ್ಕಂದಿರನ್ನೂ ಸೂಚಿಸುತ್ತವೆ. ಉಪಪದ ಲಗ್ನದಿಂದ (ಅಥವಾ ಉಪಪದ ಅಧಿಪತಿಯಿಂದ) ಏಕಾದಶದಲ್ಲಿ ಅಥವಾ ತೃತೀಯದಲ್ಲಿ ರಾಹು ಮತ್ತು ಶನಿಯಿದ್ದರೆ ಸೋದರನ ಮರಣವುಂಟಾಗುತ್ತದೆ. ಉಪಪದದಿಂದ ಅಥವಾ ಅದರ ಅಧಿಪತಿಯಿಂದ ಏಕಾದಶ ಅಥವಾ ತೃತೀಯದಲ್ಲಿ ಶುಕ್ರನಿದ್ದರೆ, ತಾಯಿಗೆ ಗರ್ಭಸ್ರಾವವಾಗುತ್ತದೆ. ಉಪಪದದಿಂದಲೋ ಅದರ ಅಧಿಪತಿಯಿಂದಲೋ ಏಕಾದಶ ಭಾವವು ಶನಿ ಕುಜರ ದೃಷ್ಟಿಗೆ ಒಳಗಾಗಿದ್ದರೆ, ಅಣ್ಣ ಸಾಯುತ್ತಾನೆ. ಅದು ತೃತೀಯ ಭಾವವಾದರೆ, ತಮ್ಮ ಸಾಯುತ್ತಾನೆ. ಉಪಪದದಿಂದಲೋ ಅದರ ಅಧಿಪತಿಯಿಂದಲೋ ತೃತೀಯದಲ್ಲಿ ಅಥವಾ ಏಕಾದಶದಲ್ಲಿ ಕುಜನಿದ್ದು ಶನಿ ವೀಕ್ಷಿತನಾದರೆ ಜಾತಕ ವಿನಾಯಿಸಿ ಉಳಿದೆಲ್ಲ ಸೋದರರೂ ಸಾಯುತ್ತಾರೆ. ಉಪಪದದಿಂದ ತೃತೀಯದಲ್ಲೋ ಏಕಾದಶದಲ್ಲೋ ಉಪಪದಾಧಿಪತಿಯು ಅಥವಾ ಕೇತುವು ಇದ್ದರೆ ಕ್ರಮವಾಗಿ ಅಕ್ಕಂದಿರೋ ತಂಗಿಯರೋ ಇರುತ್ತಾರೆ. -

ವಾಸ್ತವವಾಗಿ ಸೋದರ ಸೋದರಿಯರ ಸಂಖ್ಯೆ ಎಷ್ಟೆಂದು ಕಂಡು ಹಿಡಿಯಲು ಯಾವ ಸುಳಿವನ್ನೂ ಕೊಟ್ಟಿಲ್ಲ. ನಾವು ಸಾಮಾನ್ಯ ನಿಯಮಗಳನ್ನು ಅವಲಂಬಿಸಬೇಕಾಗುತ್ತದೆ. ತೃತೀಯ ಏಕಾದಶ ಭಾವಗಳು ಅಥವಾ ಭ್ರಾತೃ ಕಾರಕನು ಗಳಿಸಿರುವ ನವಾಂಶಗಳನ್ನು ಗಣನೆಗೆ ತೆಗೆದುಕೊಂಡು ಸಂಖ್ಯೆಯನ್ನು ನಿರ್ಣಯಿಸಬೇಕಾಗುತ್ತದೆ.

ಮೂವತ್ತಾರನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ತಂದೆ ತಾಯಿಗಳು, ಸೋದರ ಸೋದರಿಯರು ಇವರನ್ನು ಕುರಿತು ನಿರ್ಣಯಿಸಿ.**

ತಂದೆ ತಾಯಿಗಳು :—

ಪಿತೃಕಾರಕ — ಸೂರ್ಯ

ಮಾತೃಕಾರಕ — ಚಂದ್ರ

ಆರೂಢ ಲಗ್ನದಿಂದ ನವಮವು ಶನಿ ಶುಕ್ರರ ವೀಕ್ಷಣೆಗೆ ಒಳಗಾಗಿದೆ. ಪಿತೃಕಾರಕನೇ ಕುಜ ಕೇತು ರಾಹು ಚಂದ್ರರಿಂದ ವೀಕ್ಷಿತನಾಗಿದ್ದಾನೆ. ಪಿತೃ

ಕಾರಕ ಸೂರ್ಯ ಆತ್ಮಕಾರಕನೂ ಹೌದು, ಆದಕಾರಣ ಪಿತೃಭಾವ ಸಾಕಷ್ಟು ಬಲಯುತವಾಗಿದೆ, ಜಾತಕನಿಗೆ 37 ವರ್ಷ ವಯಸ್ಸಾಗಿದ್ದಾಗ ತಂದೆಯ ಸಾವುಂಟಾಯಿತು.

ಆರೂಢದಿಂದ ಚತುರ್ಥವು ಕುಜ ಕೇತುಗಳಿಂದ ಕೂಡಿದ್ದು ಮತ್ತು ಸೂರ್ಯನಿಂದ ವೀಕ್ಷಿತವಾಗಿದ್ದು, ಸಾಕಷ್ಟು ಪೀಡಿತವಾಗಿದೆ. ಬುಧ ಗುರುಗಳ ದೃಷ್ಟಿಯಿಂದ ಈ ಅರಿಷ್ಟ ಕೊಂಚ ಶಮನವಾಗಿದೆ. ಆತ್ಮಕಾರಕ ಬುಧನೂ ಕೂಡ ಆರೂಢದಿಂದ ಅಷ್ಟಮದಲ್ಲಿದ್ದು ಕುಜ ಕೇತುಗಳ ದೃಷ್ಟಿಗೆ ಒಳಗಾಗಿ ಪೀಡಿತನಾಗಿದ್ದಾನೆ. ತಾಯಿಯ ಸಾವು ತುಲಾ (ಶೂಲ ದಶೆ) ದಶೆಯಲ್ಲಿ ಸಂಭವಿಸಿತು. ಆರೂಢ ಲಗ್ನದಿಂದ ಚತುರ್ಥವಾದ ತುಲಾ ಪೀಡಿತವಾಗಿರುವುದನ್ನು ಗಮನಿಸಿ.

## 132. ಮದುವೆ

ಜೈಮಿನಿಯ ಪ್ರಕಾರ, ಕಳತ್ರ ಭಾಗ್ಯವನ್ನು ನಿರ್ಣಯಿಸಲು ಉಪಪದದಿಂದ ಪ್ರಾರಂಭಿಸಬೇಕು. ಮುಂದಿನ ಎಲ್ಲ ಗ್ರಹಸ್ಥಿತಿಗಳೂ ಉಪಪದಕ್ಕೆ ಅನ್ವಯವುಳ್ಳವು. ಆದರೆ ಉಪಪದದಿಂದಲೂ ಮತ್ತು ದಾರಕಾರಕನಿಂದಲೂ ದ್ವಿತೀಯ ಸಪ್ತಮಗಳನ್ನೂ ಅವುಗಳ ಅಧಿಪತಿಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕೆಂದು ಹೇಳಿದೆ. ದ್ವಿತೀಯವು ಶುಭದಿಂದ ಕೂಡಿದ್ದರೆ ಅಥವಾ ಶುಭ ಷಡ್ವರ್ಗಗಳಿಂದ ಕೂಡಿದ್ದರೆ ಅಥವಾ ಕಾರಕಾಂಶದಿಂದ ಸಪ್ತಮವು ಗುರು ಚಂದ್ರರಿಂದ ಕೂಡಿದ್ದರೆ ಹೆಂಡತಿ ಮತ್ತು ಗಂಡ ಸ್ಫುರದ್ರೂಪಿಯಾಗಿ ಮನೆಗೆ ಹೊಂದಿಕೊಂಡಿರುತ್ತಾರೆ. ದ್ವಿತೀಯಾಧಿಪತಿಯು ಉಚ್ಚನೋ ಶುಭರಾಶಿಯಲ್ಲಿರುವವನೋ ಅಥವಾ ನೀಚನೋ ಶತ್ರುರಾಶಿಯಲ್ಲಿರುವವನೋ ಆದಂತೆ ಹೆಂಡತಿಯು ಗೌರವಸ್ಥ ಮನೆತನದಿಂದಲೋ ನೀಚ ಮನೆತನದಿಂದಲೋ ಬಂದವಳಾಗುತ್ತಾಳೆ. ದ್ವಿತೀಯದಲ್ಲಿ ಉಚ್ಚಗ್ರಹವಿದ್ದರೆ, ಜಾತಕನಿಗೆ ಹಲವು ಹೆಂಡಿರಾಗುತ್ತಾರೆ. ಕಾರಕಾಂಶದಿಂದ ಸಪ್ತಮವು ಬುಧ ಸಂಬಂಧವನ್ನು ಪಡೆದಿದ್ದರೆ, ಹೆಂಡತಿಯು ಪಂಡಿತೆಯಾಗುತ್ತಾಳೆ. ಕಾರಕಾಂಶದಿಂದ ಸಪ್ತಮದಲ್ಲಿ ಚಂದ್ರನಿದ್ದರೆ ಜಾತಕನು ಪರದೇಶದಲ್ಲಿ ಮದುವೆಯಾಗುತ್ತಾನೆ. ದ್ವಿತೀಯವು ಪಾಪರಾಶಿಯಾಗಿದ್ದರೆ, ಅಥವಾ ಪಾಪಿಯು ಅಲ್ಲಿದ್ದರೆ ಅಥವಾ ಪಾಪದೃಷ್ಟಿಗೆ ಒಳಗಾಗಿದ್ದರೆ, ಹೆಂಡತಿಯು (ಬೇಗ) ಸಾಯುತ್ತಾಳೆ. ಈ ವಿಶಿಷ್ಟ ಸಂದರ್ಭದಲ್ಲಿ ಸೂರ್ಯನನ್ನು ಪಾಪಿ ಎಂದು ಎಣಿಸಕೂಡದು. ಕಾರ

ಕಾಂಶದಿಂದ ಸಪ್ತಮದಲ್ಲಿ ಶನಿಯಿದ್ದರೆ, ಹೆಂಡತಿಯು ಗಂಡನಿಗಿಂತ ಹಿರಿಯ ಳಾಗಿರುತ್ತಾಳೆ. ಕಾರಕಾಂಶದಿಂದ ಸಪ್ತಮದಲ್ಲಿ ರಾಹುವಿದ್ದರೆ, ಜಾತಕನು ವಿಧವೆಯನ್ನು ಮದುವೆಯಾಗುತ್ತಾನೆ ಅಥವಾ ವಿಧವೆಯ ಸಂಗಡ ಸಂಬಂಧ ಹೊಂದಿರುತ್ತಾನೆ. ಈ ಪರಿಸ್ಥಿತಿಯಲ್ಲಿ ಕುಜ ಅಥವಾ ಸೂರ್ಯ ಇದ್ದರೆ, ಹೆಂಡತಿಯು ವಿಕಲಳಾಗಿರುತ್ತಾಳೆ. ಸೂರ್ಯನು ದ್ವಿತೀಯವನ್ನು ಸೇರಿದರೆ ಅಥವಾ ದ್ವಿತೀಯವು ಸಿಂಹವಾದರೆ ಹೆಂಡತಿಯ ಸಾವುಂಟಾಗುವುದಿಲ್ಲ. ಮೇಲೆ ಕೊಟ್ಟಿರುವ ಗ್ರಹಪರಿಸ್ಥಿತಿಯನ್ನು ಶುಭ ಗ್ರಹಗಳು ಕಂಡರೆ ಕೆಡಕು ಕಡಿಮೆ ಯಾಗುತ್ತದೆ ಇಲ್ಲವೇ ನಿವಾರಣೆಯಾಗುತ್ತದೆ. ಉಪಪದದಿಂದ ದ್ವಿತೀಯವು ಉಚ್ಚ ಗ್ರಹದಿಂದ ಕೂಡಿದ್ದರೆ ಅಥವಾ ಅದು ಮಿಥುನವಾದರೆ, ಒಬ್ಬಳಿಗಿಂತ ಹೆಚ್ಚು ಹೆಂಡಿರನ್ನು ಸೂಚಿಸಬಹುದು. ಆದರೆ ದ್ವಿತೀಯದಲ್ಲಿ ಆತ್ಮಕಾರಕನೋ ದ್ವಿತೀಯಾಧಿಪತಿಯೋ ಇದ್ದರೆ, ಹೆಂಡತಿಯು ವಯಸ್ಸಾದ ಮೇಲೆ ಸಾಯು ತ್ತಾಳೆ. ದ್ವಿತೀಯದಲ್ಲಿ ಶನಿ ರಾಹುಗಳಿದ್ದರೆ ಹೆಂಡತಿಯನ್ನು ಅಪವಾದ ಕಾರಣ ಕ್ಕಾಗಿ ದೂರದೂಡಬೇಕಾಗುತ್ತದೆ. ಈ ಕೆಳಗೆ ಕಂಡ ಗ್ರಹ ಪರಿಸ್ಥಿತಿಗಳು ಇದ್ದಾಗ ಹೆಂಡತಿಯು ರೋಗಿಷ್ಠೆಯಾಗಿ ನಾನಾ ವ್ಯಾಧಿಗಳಿಂದ ನರಳುತ್ತಾಳೆ.

ಶುಕ್ರ ಕೇತುಗಳು ದ್ವಿತೀಯದಲ್ಲಿದ್ದರೆ ಅಥವಾ ಉಪಪದದಿಂದ ದ್ವಿತೀಯವನ್ನು ವೀಕ್ಷಿಸಿದರೆ—ಮುಟ್ಟು ರೋಗ ಅಥವಾ ಗರ್ಭಾಶಯ ರೋಗ; ಬುಧ ಮತ್ತು ಕೇತು—ಮೂಳೆ ಸವೆತ ; ಶನಿ, ಸೂರ್ಯ ಮತ್ತು ರಾಹು— ಸವೆಸುವ ರೋಗ ; ಶನಿ ಮತ್ತು ಕುಜ, ದ್ವಿತೀಯವು ಮಿಥುನ ಅಥವಾ ಕನ್ಯಾ—ಪೀನಸ ವ್ಯಾಧಿ ; ಗುರು ಶನಿ, ದ್ವಿತೀಯವು ಮೇಷ ಅಥವಾ ವೃಶ್ಚಿಕ—ಪೀನಸ ; ಗುರು ಶನಿ, ದ್ವಿತೀಯವು ಕುಜ ಬುಧ ರಾಶಿ—ಮಾನಸಿಕ ರೋಗ; ಶನಿ ರಾಹು, ದ್ವಿತೀಯವು ಕನ್ಯಾ ಅಥವಾ ತುಲಾ—ವಾಯು ರೋಗ, ಜಲೋದರ ಮುಂತಾದವು. ಮೇಲೆ ಸೂಚಿಸಿರುವ ಜಾಡ್ಯಗಳು ಶುಭ ದೃಷ್ಟಿ ಯಿಂದ ಸಾಕಷ್ಟು ಕಡಿಮೆ ಆಗುತ್ತವೆ. ಉಪಪದ ಆತ್ಮಕಾರಕಗಳೆರಡರ ದ್ವಿತೀಯ ಭಾವಗಳೂ ಗಮನಾರ್ಹವಾಗಿ ಪೀಡಿತವಾಗಿದ್ದರೆ ಮದುವೆಯು ಕ್ಲೇಶದಾಯಕವಾಗುತ್ತದೆ.

ಮೂವತ್ತೇಳನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಸಪ್ತಮ ಭಾವವನ್ನು ಪರೀಕ್ಷಿಸಿ, ಕಳತ್ರಕಾರಕನು ಕುಜ.**

ಉಪಪದದಿಂದ ದ್ವಿತೀಯವು ಶುಭರಾಶಿ. ದ್ವಿತೀಯಾಧಿಪತಿಯು ಶುಭ ರಾಶಿಯಲ್ಲಿದ್ದಾನೆ. ಹೆಂಡತಿಯು ಗೌರವಸ್ಥ ಮನೆತನದವಳು. ದ್ವಿತೀಯ ವನ್ನು ಇಬ್ಬರು ಪರಮ ಪಾಪಿಗಳು ನೋಡುತ್ತಾರೆ. ದಾರಕಾರಕ ಕುಜನು ಶುಭರಾಶಿಯಲ್ಲಿದ್ದು ಶುಭವೀಕ್ಷಿತನಾಗಿ (ಸೂರ್ಯನೂ ಶುಭನೆ) ಇರದಿದ್ದರೆ, ಹೆಂಡತಿಯು ಬೇಗನೆ ಸಾಯುತ್ತಿದ್ದಳು. ಪರಿಣಾಮವಾಗಿ ಹೆಂಡತಿಯು ಜಾತಕ ನಿಗೆ 48 ವರ್ಷಗಳಾಗುವವರೆಗೆ ಬದುಕಿದ್ದಳು. ಉಪಪದದಿಂದ ದ್ವಿತೀಯವು ಕುಜವೀಕ್ಷಿತವಾಗಿರುವುದನ್ನು ಗಮನಿಸಿ. ಹೆಂಡತಿಯ ಸಾವು ಗರ್ಭಸ್ರಾವ ಕಾಲ ದಲ್ಲಿ ವಿಪರೀತ ರಕ್ತ ನಷ್ಟವುಂಟಾದುದರಿಂದ.

## 133. ಸ್ತ್ರೀಯರಿಗೆ ಅನ್ವಯವಾಗುವ ಗ್ರಹ ಸ್ಥಿತಿಗಳು

ಯಾವ ಸ್ತ್ರೀಯ ನವಾಂಶ ಕುಂಡಲಿಯಲ್ಲಿ ಗುರುವು ಬುಧನಿಂದ ತ್ರಿಕೋಣದಲ್ಲಿರುತ್ತಾನೋ ಅಥವಾ ಲಗ್ನದಿಂದ ತ್ರಿಕೋಣದಲ್ಲಿರುತ್ತಾನೋ ಆ ಹೆಂಗಸು ಪರಿಶುದ್ಧಳಾಗಿ ಗಂಡನಿಗೆ ವಿಧೇಯಳಾಗಿರುತ್ತಾಳೆ. ಶುಕ್ರ ಲಗ್ನ ದಲ್ಲಿದ್ದಾಗಲೂ ಇದೇ ಫಲ ಕೊಡುತ್ತಾನೆ. ಕೇತುವು ಲಗ್ನದಲ್ಲೋ ಲಗ್ನ (ನವಾಂಶ)ದಿಂದ ತ್ರಿಕೋಣದಲ್ಲೋ ಇದ್ದಾಗ ಹೆಂಗಸು ಕೊಳಕಿಯಾಗಿ ಜುಗುಪ್ಸೆಯುಂಟುಮಾಡುತ್ತಾಳೆ. ಚಂದ್ರನು ವೃಷಭ ನವಾಂಶದಲ್ಲೂ ಬುಧ ಶುಕ್ರರು ನವಾಂಶದಲ್ಲಿ ಲಗ್ನದಿಂದ ಚತುರ್ಥದಲ್ಲೂ ಇದ್ದಾಗ, ಹೆಂಗಸು ಒಳ್ಳೆ ಸ್ವಭಾವದವಳಾಗಿಯೂ ತುಂಬ ಬುದ್ಧಿವಂತೆಯೂ ಆಗಿರುತ್ತಾಳೆ. ಶನಿಯು ನವಾಂಶ ಲಗ್ನದಲ್ಲೋ ಅದರಿಂದ ತ್ರಿಕೋಣದಲ್ಲೋ ಇದ್ದಾಗ, ಹೆಂಗಸು ಹೆಣ್ಣಿನ ರೂಪಲಾವಣ್ಯಗಳನ್ನು ಕಳೆದುಕೊಂಡು ನೋಡಲು ಗಂಡು ಗಡಸಾಗಿರುತ್ತಾಳೆ. ಕೇತುವು ನವಾಂಶ ಲಗ್ನದಲ್ಲೋ ಅಲ್ಲಿಂದ ತ್ರಿಕೋಣ ದಲ್ಲೋ ಇದ್ದರೆ, ಆ ಹೆಣ್ಣು ಛಲಗಾತಿಯೂ, ಕೊಳಕಿಯೂ, ಕುರೂಪಿಯೂ ಸೋಮಾರಿಯೂ ಆಗಿರುತ್ತಾಳೆ. ಲಗ್ನವನ್ನು ಕುಜ ವೀಕ್ಷಿಸಿದರೆ ಹೆಣ್ಣು ಅತಿ ಕಾಮಿಯೂ ಕೋಪಿಷ್ಠಳೂ ಆಗುತ್ತಾಳೆ. ಜನ್ಮಲಗ್ನ ರಾಶಿಯಿಂದ ನವಮವು ಅಥವಾ ದ್ವಾದಶವು ನವಾಂಶ ಲಗ್ನ ರಾಶಿಯಾದರೆ ಅವಳು ದುಷ್ಟೆಯೂ ಕಾಮಿನಿಯೂ ಕೆಟ್ಟವಳೂ ಆಗುತ್ತಾಳೆ. ಚಂದ್ರ ಶುಕ್ರರು ಹೋರಾ ಲಗ್ನದಲ್ಲಿ ದ್ದರೆ, ಹೆಣ್ಣು ಅನುರಕ್ತೆಯೂ ವಿಷಯಾಸಕ್ತೆಯೂ ಆಗುತ್ತಾಳೆ. ಹೋರಾ ಲಗ್ನದ ನವಾಂಶವು ಕೇತುವಿನಿಂದ ಕೂಡಿದ್ದರೆ, ಅಥವಾ ಪಾಪದೃಷ್ಟಿಗೊಳ ಗಾಗಿದ್ದರೆ, ಅವಳು ಜಾರೆಯಾಗುತ್ತಾಳೆ. ಉಪಪದದಿಂದ ಅಷ್ಟಮವು ಕೇತು

ಕುಜರ ದೃಷ್ಟಿಗೆ ಒಳಗಾಗಿದ್ದರೆ, ಹೆಣ್ಣು ಕ್ರೂರ ಹೃದಯಳೂ ಭ್ರಷ್ಟಳೂ ಆಗಿ, ತನ್ನ ಗಂಡನನ್ನೇ ಕೊಲೆ ಮಾಡಿಯಾಳು.

ನವಾಂಶದಲ್ಲಿ ಸೂರ್ಯನು ಲಗ್ನದಿಂದ ತ್ರಿಕೋಣದಲ್ಲಿದ್ದರೆ, ವೈಧವ್ಯ ಕೊಡುತ್ತಾನೆ. ಚಂದ್ರನು ಆತ್ಮಕಾರಕನಿಂದಲೋ ಲಗ್ನದಿಂದಲೋ ವರ್ಣದ ಲಗ್ನದಿಂದಲೋ ತೃತೀಯದಲ್ಲಿದ್ದರೆ ವೈಧವ್ಯವನ್ನು ಕೊಡುತ್ತಾನೆ. ಹೋರಾ ಲಗ್ನದಿಂದ ಅಷ್ಟಮದಲ್ಲಿ ಕುಜ ಕೇತುಗಳಿದ್ದರೆ, ಪೂರ್ವ ವಯಸ್ಸಿನ ವೈಧವ್ಯ ವನ್ನು ನುಡಿಯುತ್ತಾರೆ.

## 134. ಮಕ್ಕಳು

ಉಪಪದದಿಂದ ಪಂಚಮವು ಪುತ್ರಭಾವ. ಲಗ್ನದಿಂದ ಪಂಚಮವೂ ಸಂತಾನಸೂಚಕವೇ. ಈ ಅಂಕದಲ್ಲಿ ಕೊಟ್ಟಿರುವ ಎಲ್ಲ ಗ್ರಹ ಪರಿಸ್ಥಿತಿಗಳೂ ಈ ಎರಡು ಅಂಶಗಳಿಗೆ ಸಂಬಂಧಪಟ್ಟವು. ಮಕ್ಕಳಿಗೆ ಸಂಬಂಧಪಟ್ಟ ವಿಷಯ ಗಳನ್ನು ನಿರ್ಣಯಿಸುವಾಗ ಉಪಪದದ ಅಧಿಪತಿಯ ಪಂಚಮವನ್ನು ಗಣನೆಗೆ ತೆಗೆದುಕೊಳ್ಳಬೇಕು ಎಂದು ಹೇಳಿದೆ.

ಉಪಪದದಿಂದ ಏಕಾದಶವೋ ಅಥವಾ ಉಪಪದಾಧಿಪತಿಯಿಂದ ಪಂಚಮವೋ ಸಮರಾಶಿಯಾದರೆ, ಹಲವಾರು ಮಕ್ಕಳು ಹುಟ್ಟುತ್ತಾರೆ. ಉಪಪದದಿಂದ ಪಂಚಮವು ಬೆಸರಾಶಿಯಾದರೆ ಅಥವಾ ಉಪಪದದಿಂದ ಸಪ್ತಮದಲ್ಲಿ ಅಥವಾ ಉಪಪದಾಧಿಪತಿಯಿಂದ ಪಂಚಮದಲ್ಲಿ ಸೂರ್ಯ ರಾಹು ಗಳಿದ್ದರೆ, ಆ ಜಾತಕನಿಗೆ ಹಲವಾರು ಮಕ್ಕಳಾಗುತ್ತವೆಂದು ನುಡಿಯಿರಿ. ಉಪಪದದಿಂದ ಪಂಚಮದಲ್ಲಿ ಚಂದ್ರನಿದ್ದರೆ ಒಂದೇ ಮಗು ಹುಟ್ಟುತ್ತದೆ. ಬುಧ ಶನಿಗಳು ಸಪ್ತಮವನ್ನೋ ಅಥವಾ ಸಪ್ತಮದಲ್ಲಿರುವ ಗ್ರಹದ ನವಾಂಶ ವನ್ನೋ ಅಥವಾ ಸಪ್ತಮಾಧಿಪತಿಯನ್ನೋ ಅಥವಾ ಸಪ್ತಮಾಧಿಪತಿಯ ನವಾಂಶವನ್ನೋ ಕೂಡಿದ್ದರೆ, ಆ ವ್ಯಕ್ತಿಗೆ ಮಕ್ಕಳಾಗುವುದಿಲ್ಲ. ಈ ಗ್ರಹ ಬಾಧೆಯು ಕಡಿಮೆಯಾಗಿದ್ದರೆ, ವಯಸ್ಸಾದ ಮೇಲೆ ಮಕ್ಕಳಾಗುತ್ತವೆ. ಉಪ ಪದದಿಂದ ಸಪ್ತಮದಲ್ಲೋ ಏಕಾದಶದಲ್ಲೋ ಕುಜ ಶನಿಗಳು ಇದ್ದರೆ, ಜಾತಕನು ದತ್ತುಪುತ್ರನನ್ನು ಸ್ವೀಕರಿಸುತ್ತಾನೆ. ನವಾಂಶ ಕುಂಡಲಿಯಲ್ಲಿ ಬುಧನು ಲಗ್ನದಿಂದ ತ್ರಿಕೋಣದಲ್ಲಿದ್ದರೆ, ಹೆಂಡತಿಯು ಬಂಜೆಯಾಗುತ್ತಾಳೆ.

ಮೂವತ್ತೆಂಟನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಸಂತಾನ ಭಾಗ್ಯವನ್ನು ನಿರ್ಣಯಿಸಿ.**

ಉಪಪದದಿಂದ ಪಂಚಮವು ಬೆಸರಾಶಿ, ಉಪಪದದಿಂದ ಏಕಾದಶ ದಲ್ಲಿದ್ದು ಸಾಕಷ್ಟು ಪ್ರಬಲನಾಗಿದ್ದಾನೆ. ಜಾತಕನಿಗೆ ಹಲವು ಮಕ್ಕಳಾಗಿದ್ದವು.

## 135. ವೃತ್ತಿ

ಪರಾಶರಿ ಪದ್ಧತಿಯಲ್ಲಿ ದಶಮ ಭಾವವು ಜೀವನೋಪಾಯ, ಕೀರ್ತಿ ಗೌರವಗಳನ್ನು ಸೂಚಿಸುತ್ತದೆ. ಆದರೆ ಜೈಮಿನಿಯಲ್ಲಿ, ವ್ಯಕ್ತಿಯು ಅವಲಂಬಿಸ ಬಹುದಾದ ಜೀವನೋಪಾಯವನ್ನು ಸೂಚಿಸುವುದಕ್ಕೆ ಕಾರಕಾಂಶವು ಮುಖ್ಯ ಪಾತ್ರವನ್ನು ಪಡೆದಿದೆ. ಜೀವನ ವೃತ್ತಿಯ ನಿರ್ದಿಷ್ಟ ಸ್ವರೂಪವನ್ನು ನಿರ್ಣಯಿಸಲು ಕಷ್ಟವಾದರೂ ಜೈಮಿನಿ ಪ್ರತಿಪಾದಿಸಿರುವ ವಿಧಾನಗಳ್ನು ಜೋಪಾನವಾಗಿ ಪರೀಕ್ಷಿಸಿದರೆ, ವೃತ್ತಿಯ ಆಯ್ಕೆಯಲ್ಲಿ ಖಚಿತವಾದ ಸುಳಿ ವನ್ನು ನೀಡಬಲ್ಲಂಥ ತತ್ವಗಳನ್ನು ಕಂಡುಹಿಡಿಯಲು ಶಕ್ಯವಾದೀತು. ಕಾರಕಾಂಶಕ್ಕೆ ಮುಂದಿನ ಪರಿಸ್ಥಿತಿಗಳನ್ನು ಅನ್ವಯಿಸಿ ನೋಡಬೇಕು. ಕಾರಕಾಂಶದಲ್ಲೋ ಅಥವಾ ಅದರ ದಶಮದಲ್ಲೋ ಯಾವ ಗ್ರಹವೂ ಇಲ್ಲ ವಾದರೆ, ಕಾರಕಾಂಶದಿಂದ ದಶಮದ ಅಧಿಪತಿಯನ್ನು ತೆಗೆದುಕೊಳ್ಳಿ. ನವಾಂಶದಲ್ಲಿ ಆ ಅಧಿಪತಿಯ ಸನ್ನಿವೇಶವನ್ನು ಗಮನಿಸಿ, ವೃತ್ತಿಯನ್ನು ಊಹಿಸಿ.

ಕಾರಕಾಂಶದಲ್ಲಿ ಸೂರ್ಯನಿದ್ದರೆ ರಾಜಕೀಯ ನಾಯಕತ್ವವನ್ನು ಅಥವಾ ರಾಜ್ಯ ಸರಕಾರದಲ್ಲಿ ನೌಕರಿಯನ್ನು ಕೊಡುತ್ತಾನೆ. ಕಾರಕಾಂಶದಲ್ಲಿ ಪೂರ್ಣಚಂದ್ರ ಮತ್ತು ಶುಕ್ರರಿದ್ದರೆ ಗ್ರಂಥಕರ್ತರು, ಗುರುಗಳು, ಜ್ಞಾನ ಪ್ರಸಾರದಿಂದ ಜೀವನ ನಡೆಸುವವರನ್ನು ಸೂಚಿಸುತ್ತಾರೆ. ಆತ್ಮಕಾರಕನ ಅಂಶ ದಲ್ಲಿ ಕುಜನಿದ್ದರೆ, ಕಾರ್ಖಾನೆಗಳು, ಮುದ್ರಣಾಲಯಗಳು, ರಾಸಾಯನಿಕ ಗಳು, ಲೋಹಗಳು, ಬೆಂಕಿ ಮುಂತಾದುವಕ್ಕೆ ಸಂಬಂಧಿಸಿದ ವೃತ್ತಿಯು ಸೂಚಿತವಾಗುತ್ತದೆ. ಬುಧನು ವ್ಯಾಪಾರಿ, ಶಿಲ್ಪಿ, ಕಲಾವಿದ, ಜವಳಿ ವರ್ತಕ ಪ್ರಾಚೀನ ವಿದ್ಯಾಪ್ರವೀಣರನ್ನು ನಿರ್ದೇಶಿಸುತ್ತಾನೆ. ಕಾರಕಾಂಶದಲ್ಲಿ ಗುರು ವಿದ್ದಾಗ, ಮತವಿಷಯಗಳಲ್ಲಿ ನಿಷ್ಣಾತನಾದವನೂ ಉದ್ದಾಮ ವೇದಾಂತಿಯೂ ಹುಟ್ಟುತ್ತಾನೆ. ಕಾರಕಾಂಶದಲ್ಲಿರುವ ಶುಕ್ರನು ಗ್ರಂಥಕರ್ತ, ಆಡಳಿತಗಾರ, ಮಂತ್ರಿ, ಸರಕಾರಿ ಅಧಿಕಾರಿಗಳನ್ನು ನಿರ್ಮಾಣ ಮಾಡುತ್ತಾನೆ. ಶನಿಯು ವಣಿಕಶ್ರೇಷ್ಠನನ್ನು ರೂಪುಗೊಳಿಸುತ್ತಾನೆ. ಕಾರಕಾಂಶದಲ್ಲಿ ರಾಹುವಿದ್ದಾಗ

ಜಾತಕನು ಧನುರ್ವಿದ್ಯೆಯಿಂದ ಅಥವಾ ಔಷಧ ವ್ಯಾಪಾರದಿಂದ, ಯಂತ್ರ ತಯಾರಿಕೆಯ ವೃತ್ತಿಯಿಂದ ಅಥವಾ ಮೋಸದಿಂದ ಜೀವನೋಪಾಯ ಸಾಗಿಸುತ್ತಾನೆ, ಅಥವಾ ಯಂತ್ರಕರ್ಮಿಯಾಗುತ್ತಾನೆ. ಕೇತುವು ಮೋಸ ದಿಂದ ಜೀವನ ನಡೆಸುವಂತೆ ಮಾಡುತ್ತಾನೆ. ರಾಹು ರವಿಗಳು ಕಾರಕಾಂಶ ದಲ್ಲಿದ್ದಾಗ ನಿರ್ಬಾಧಿತರಾದರೆ, ವಿಷದ ಔಷಧಿಗಳಲ್ಲಿ ನಿರತನಾದ ವೈದ್ಯನನ್ನು ಸೂಚಿಸುತ್ತಾರೆ ಅಥವಾ ಔಷಧಿ ವ್ಯಾಪಾರಿಗಳೋ ರಾಸಾಯನಿಕ ವ್ಯಾಪಾರಿ ಗಳೋ ಆಗಿರಬಹುದು. ಕಾರಕಾಂಶ ರಾಶಿಯು ಗುಳಿಕದ ರಾಶಿಯಲ್ಲಿ ಬಿದ್ದು (ಅಂಕ 34ನ್ನು ನೋಡಿ) ಚಂದ್ರ ವೀಕ್ಷಿತವಾದರೆ, ಇತರರನ್ನು ವಂಚಿಸಿ ಜಾತಕನು ಬದುಕು ನಡೆಸುತ್ತಾನೆ. ಯಜ್ಞ ಯಾಗಾದಿ ಧಾರ್ಮಿಕ ಸಮಾರಂಭ ಗಳನ್ನು ಮಾಡುವುದರಿಂದ ಜೀವನ ನಡೆಸುವ ವ್ಯಕ್ತಿಯು ಕಾರಕಾಂಶದಲ್ಲಿ ಕೇತು ವಿದ್ದು ಶುಕ್ರ ವೀಕ್ಷಿತನಾಗಿರುತ್ತಾನೆ. ಸೂರ್ಯ ಶುಕ್ರರು ಕಾರಕಾಂಶವನ್ನು ವೀಕ್ಷಿಸಿದರೆ, ಜಾತಕನು ರಾಯಭಾರಿಯಾಗುತ್ತಾನೆ. ಅಥವಾ ರಾಜಸೇವೆಯಲ್ಲಿ ಇರುತ್ತಾನೆ. ದಶಮದಲ್ಲಿ ಸೂರ್ಯನಿದ್ದು ಗುರುವಿನಿಂದ ಮಾತ್ರ ವೀಕ್ಷಿತನಾದರೆ ಆ ವ್ಯಕ್ತಿಯು ಗೋರಕ್ಷಣೆಯಿಂದ ಬದುಕು ನಡೆಸುತ್ತಾನೆ ಅಂದರೆ ಹಾಲು ಮಾರಾಟ ಕೇಂದ್ರ ನಡೆಸುವುದು ಮುಂತಾದುವು ಆಗಬಹುದು. ಕಾರಕಾಂಶ ದಿಂದ ತೃತೀಯದಲ್ಲಿ ಷಷ್ಠದಲ್ಲಿ ಪಾಪಿಗಳಿದ್ದರೆ ಬೇಸಾಯ ತೋಟಗಾರಿಕೆ ಯನ್ನೂ, ಕಾರಕಾಂಶದಿಂದ ನವಮದಲ್ಲಿ ಗುರುವಿದ್ದರೆ ಜಮೀನುಗಳಿಂದ ವರ ಮಾನವನ್ನು ಕೊಡುತ್ತಾರೆ. ಕಾರಕಾಂಶದಲ್ಲಿರುವ ಚಂದ್ರನನ್ನು ಶುಕ್ರ ನೋಡಿ ದರೆ ಜಾತಕನು ರಸವಿದ್ಯೆಯಲ್ಲಿ ತೊಡಗಬಹುದು. ಜಾತಕನು ಡಾಕ್ಟರಾಗ ಬೇಕಾದರೆ ಕಾರಕಾಂಶಸ್ಥನಾದ ಚಂದ್ರನಿಗೆ ಶುಭದೃಷ್ಟಿಯಿರಬೇಕು. ಶನಿಯು ಕಾರಕಾಂಶದಲ್ಲೋ ಅಲ್ಲಿಂದ ಚತುರ್ಥದಲ್ಲೋ ಇದ್ದರೆ, ಜಾತಕನು ಆಯುಧ ಪ್ರಯೋಗ ನಿಪುಣನಾಗಿ, ಸೈನ್ಯವನ್ನೋ ಪೋಲೀಸ್ ದಳವನ್ನೋ ಸೇರ ಬಹುದು. ಯಾರ ಕಾರಕಾಂಶವನ್ನು ಅಥವಾ ಅಲ್ಲಿಂದ ಚತುರ್ಥವನ್ನು ಕೇತು ಕೊಡುತ್ತಾನೋ ಅವನು ಗಡಿಯಾರ ಸರಿಪಡಿಸುವವನಾಗಿರಬಹುದು. ಆ ಸ್ಥಾನದಲ್ಲಿ ರಾಹುವಿದ್ದರೆ, ವೃತ್ತಿಯು ಯಂತ್ರಕರ್ಮ ಅಥವಾ ಗಣಿ ಕೆಲಸ ವಾಗಬಹುದು. ಸೂರ್ಯ ಅಥವಾ ಕುಜ ಕಾರಕಾಂಶದಿಂದ ಚತುರ್ಥದಲ್ಲಿದ್ದರೆ, ಆ ವ್ಯಕ್ತಿ ಆಯುಧ ವ್ಯಾಪಾರಕ್ಕೆ ಸಂಬಂಧಪಟ್ಟ ವೃತ್ತಿಯಿಂದ ಜೀವಿಸುತ್ತಾನೆ. ಚಂದ್ರ ಗುರು ಕಾರಕಾಂಶದಲ್ಲೋ ಅಲ್ಲಿಂದ ಪಂಚಮದಲ್ಲೋ ಇದ್ದರೆ, ಅಂತಹ ಜಾತಕ ಪ್ರಖ್ಯಾತ ಬರಹಗಾರ, ಗ್ರಂಥಕರ್ತ ಅಥವಾ ಸಂಪಾದಕ

ಅಥವಾ ಪತ್ರಕರ್ತ ಆಗುತ್ತಾನೆ. ಗುರುವಿನ ಬದಲು ಶುಕ್ರನಿದ್ದರೆ, ವ್ಯಕ್ತಿ ಸಾಧಾರಣ ಬರಹಗಾರ, ಗ್ರಂಥಕರ್ತ ಅಥವಾ ಸಂಪಾದಕ ಆಗುತ್ತಾನೆ. ಕಾರ ಕಾಂಶದಲ್ಲಿ ಶುಕ್ರನೊಬ್ಬನೇ ಇದ್ದರೆ, ಅಥವಾ ಅಲ್ಲಿಂದ ಪಂಚಮದಲ್ಲಿದ್ದರೆ, ಜಾತಕ ಮಹಾ ಕವಿ ಅಥವಾ ಮಹಾ ಸಾಹಿತಿ ಆಗುತ್ತಾನೆ. ಗುರುವೊಬ್ಬನೇ ಇದ್ದರೆ, ಜಾತಕ ವಿಪುಲ ಜ್ಞಾನವುಳ್ಳವನಾಗಿ ಗ್ರಂಥಕರ್ತನಾಗಬಹುದು. ಗುರುವೋ ಶುಕ್ರನೋ ಲಗ್ನ ಮತ್ತು ಸಪ್ತಮಗಳ ಅಧಿಪತಿಗಳಿಂದ ಪಂಚಮ ದಲ್ಲಿ ಇದ್ದರೆ, ಆ ಮನುಷ್ಯ ಉಚ್ಚ ಪ್ರಭುತ್ವಾಧಿಕಾರಿ ಆಗುತ್ತಾನೆ. ಲಗ್ನ ಮತ್ತು ಸಪ್ತಮ ಅಧಿಪತಿಗಳಿಂದ ತೃತೀಯದಲ್ಲೋ ಷಷ್ಠದಲ್ಲೋ ಪಾಪಿ ಗಳಿದ್ದರೆ, ಆ ವ್ಯಕ್ತಿ ಸೇನಾನಿ ಆಗುತ್ತಾನೆ. ಕಾರಕಾಂಶಕ್ಕೆ ಸಂಬಂಧಪಟ್ಟಂತೆ ಶುಭ ಪಾಪ ಪ್ರಭಾವಗಳು ಸರಿಸಮವಾಗಿದ್ದರೆ, ಆ ವ್ಯಕ್ತಿ ತನ್ನ ಕೋಮಿನ ನಾಯಕನಾಗುತ್ತಾನೆ.

ಮೇಲಿನ ವಿಚಾರದಿಂದ ಜೀವನೋಪಾಯವನ್ನೋ ವೃತ್ತಿಯನ್ನೋ ನಿರ್ಣಯಿಸುವುದಕ್ಕೆ ಕಾರಕಾಂಶ ಮತ್ತು ಅದರಿಂದ ಕೆಲವು ಭಾವಗಳಲ್ಲಿರುವ ಗ್ರಹಗಳ ಸನ್ನಿವೇಶವನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳಲಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಮೇಲೆ ಸೂಚಿಸಿರುವ ಸಲ್ಲಿಸಿರುವ ಸನ್ನಿವೇಶವು ಸಂಬಂಧಪಟ್ಟ ಗ್ರಹಗಳು ಮತ್ತು ರಾಶಿಗಳು ಶುಭವರ್ಗ, ಪಾಪವರ್ಗಗಳ ಪ್ರಭಾವಕ್ಕೆ ಒಳಗಾದ ಹಾಗೆಲ್ಲಾ ಪ್ರಬಲವೋ ದುರ್ಬಲವೋ ಆಗುತ್ತವೆ. ಸೂತ್ರಗಳನ್ನು ಜಾಗರೂಕತೆಯಿಂದ ಪರಿಶೀಲಿಸಿದರೆ, ಮುಂದೆ ಸೂಚಿಸಿರುವಂತೆ ಆಯಾ ಗ್ರಹಗಳಿಗೆ ಆಯಾ ವೃತ್ತಿಗಳನ್ನು ವಿಂಗಡಿಸಬಹುದು.

**ಸೂರ್ಯ :** ಅಧ್ಯಕ್ಷರು, ರಾಜರು, ಮಂತ್ರಿಗಳು ಮುಂತಾದ ಉಚ್ಚ ಪ್ರಭುತ್ವಾಧಿಕಾರಿಗಳು.

**ಚಂದ್ರ :** ಮಂತ್ರಿಗಳು ಮತ್ತು ಉಚ್ಚ ಪ್ರಭುತ್ವಾಧಿಕಾರಿಗಳು.

**ಕುಜ :** ಸೇನಾನಿಗಳು, ವಿಜ್ಞಾನಿಗಳು, ಅಗ್ನಿ ಉದ್ಯಮಗಳು.

**ಬುಧ :** ದರ್ಶನಪ್ರಾಧ್ಯಾಪಕರು, ಗ್ರಂಥಕರ್ತರು, ಕಲಾವಿದರು, ಶಿಲ್ಪಿಗಳು, ನೇಕಾರರು, ಪತ್ರಕರ್ತರು, ಸಂಪಾದಕರು, ನ್ಯಾಯವಾದಿಗಳು, ಬುದ್ಧಿಜೀವಿಗಳು, ವ್ಯಾಪಾರಿ ವ್ಯವಹಾರಿಗಳು.

**ಗುರು :** ಪುರೋಹಿತ, ಪೂಜಾರಿಗಳು, ನ್ಯಾಯಮೂರ್ತಿಗಳು, ದರ್ಶನಪ್ರಾಧ್ಯಾಪಕರು, ನಾಯಕ ವರ್ಗದವರು, ಜ್ಯೋತಿಷರು.

**ಶುಕ್ರ :** ಸರಕಾರಿ ಅಧಿಕಾರಿಗಳು, ರಾಯಭಾರಿಗಳು, ರಾಜಪ್ರತಿನಿಧಿಗಳು.

**ಶನಿ :** ಸಾಧಾರಣ ವೃತ್ತಿಯವರು, ಶಸ್ತ್ರಾಸ್ತ್ರ ತಯಾರಕರು, ಲೋಹ ವ್ಯಾಪಾರಿಗಳು, ಮುದ್ರಕರು, ಅಂಗರಕ್ಷಕರು.

**ರಾಹು :** ಕಳ್ಳರು, ಅಂಗರಕ್ಷಕರು, ಡಾಕ್ಟರುಗಳು, ವೈದ್ಯಕರೇ ಮೊದಲಾದವರು.

**ಕೇತು :** ಸೇವಕರು, ಕಾರ್ಮಿಕರು, ವಾಹನ ನಡೆಸುವವರು, ಯಂತ್ರ ಕರ್ಮಿಗಳು, ಗಾರೆ ಕೆಲಸದವರು, ಇತರೆ ಕೆಲಸದವರು.

ಮೂವತ್ತೊಂಬತ್ತನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ವೃತ್ತಿ ನಿರ್ಣಯ ಮಾಡಿ.**

ಕಾರಕಾಂಶವಲ್ಲಾಗಲೀ ಅಲ್ಲಿಂದ ದಶಮವಲ್ಲಾಗಲೀ ಯಾವ ಗ್ರಹಗಳೂ ಇಲ್ಲ. ಕಾರಕಾಂಶದಿಂದ ದಶಮಾಧಿಪತಿಯು ಸೂರ್ಯ ಶುಕ್ರ ಕುಜರೊಡ ಗೂಡಿದ್ದಾನೆ. ದಶಮವನ್ನು ರಾಹುಕೇತುಗಳು ವೀಕ್ಷಿಸುತ್ತಾರೆ. ಪರಿಣಾಮವಾಗಿ ಕಾರಕಾಂಶದಿಂದ ದಶಮಾಧಿಪತಿಯಿರುವ ಪ್ರಬಲ ಸ್ಥಾನ ಮತ್ತು ಮೇಲೆ ಸೂಚಿಸಿರುವಂತೆ ದಶಮಾಧಿಪತಿಯ ಸಂಗಡ ಇರುವ ಗ್ರಹಗಳು ಇವು ಜಾತಕನ ವೃತ್ತಿಯನ್ನು ನಿರ್ಣಯಿಸಬೇಕು. ಅಂದರೆ ಶನಿ—ವ್ಯಾಪಾರ ವ್ಯವಹಾರ, ಕುಜ—ಮುದ್ರಣ ಯಂತ್ರಗಳು; ಶುಕ್ರ—ಗ್ರಂಥಕರ್ತ ಇತ್ಯಾದಿ. ಈ ರೀತಿ ವಿವಿಧ ವೃತ್ತಿಗಳು ಸೂಚಿತವಾಗಿವೆ.

## 136. ಸಾವಿನ ಮೂಲ

ನಾವು ಈಗಾಗಲೇ ಅಂಕ 100 ಮತ್ತು 122ರಲ್ಲಿ ಆಯುರ್ದಾಯವನ್ನೂ ಮಾರಕ ರಾಶಿಗಳನ್ನೂ ಕಂಡುಹಿಡಿಯುವ ವಿಧಾನಗಳನ್ನು ಚರ್ಚಿಸಿದ್ದೇವೆ. ಸಾವು ಯಾವ ರೀತಿಯಲ್ಲಿ ಸಂಭವಿಸುತ್ತದೆ ಅಂದರೆ ಅಂತ್ಯವು ಸ್ವಾಭಾವಿಕವೆ, ಹಿಂಸಾತ್ಮಕವೆ ಅಥವಾ ಶಾಂತಿಯುತವೆ ಮತ್ತು ಸ್ವಾಭಾವಿಕ ಹಿಂಸಾತ್ಮಕ ಶಾಂತಿಯುತ ಮರಣದ ಸ್ವರೂಪ ಎಂಥದ್ದು ಎಂಬುದನ್ನು ಗುರುತಿಸುತ್ತೇನೆ. ಜೈಮಿನಿ ಸೂತ್ರಗಳಿಂದ ಸಂಗ್ರಹಿಸಿರುವ ತತ್ವಗಳನ್ನು ಹಾಗೇ ಇಲ್ಲಿ ಕೊಟ್ಟಿದ್ದೇನೆ. ಅವುಗಳ ಅನ್ವಯ ಅನನ್ವಯಗಳನ್ನು ವಾಚಕರ ಸ್ವಾನುಭವಕ್ಕೆ ಬಿಡುತ್ತೇನೆ.

## 137. ಸಾವಿನ ಸ್ವರೂಪ

ಜೈಮಿನಿ ವ್ಯಾಖ್ಯಾನಕಾರರ ಮೇರೆಗೆ, ದುರ್ಮರಣ ಅಂದರೆ ಹಿಂಸಾತ್ಮಕ ವಾದ ಸಾವು, ಅಪಮೃತ್ಯು, ಬೆಂಕಿ ಸ್ಫೋಟನೆ, ಭೂಕಂಪ, ನೀರಲ್ಲಿ ಮುಳುಗು ವುದು, ಜ್ವಾಲಾಮುಖಿ ಸ್ಫೋಟನೆ, ಎತ್ತರದಿಂದ ಬೀಳುವುದು ಮುಂತಾದ ಕಾರಣಗಳಿಂದ ಉಂಟಾಗುವ ಸಾವು. ಶುಭ ಮರಣ ಅಥವಾ ಸ್ವಾಭಾವಿಕವಾದ ಸಾವು ಅಂದರೆ ಜ್ವರಗಳೇ ಮುಂತಾದ ರೋಗಗಳಿಂದ ಸಂಭವಿಸುವ ಸಾವು. ಲಗ್ನದಿಂದಲೋ ಆತ್ಮಕಾರಕನಿಂದಲೋ ತೃತೀಯದಲ್ಲಿ ಪಾಪಿಗಳಿದ್ದರೆ, ಅಸ್ವಾಭಾವಿಕ ಸಾವುಂಟಾಗುತ್ತದೆ. ಶುಭಗ್ರಹಗಳು ಸ್ವಾಭಾವಿಕ ಅಂತ್ಯವನ್ನು ಸೂಚಿಸುತ್ತವೆ. ಇಲ್ಲೂ ಕೂಡ ಗ್ರಹ ಪೀಡೆಗಳಿಗೆ ಶುಭದೃಷ್ಟಿಯುಂಟಾಗು ವುದರಿಂದಲೂ ಗ್ರಹಗಳ ಶುಭಸ್ಥಿತಿಗೆ ಪಾಪದೃಷ್ಟಿಯುಂಟಾಗುವುದರಿಂದಲೂ ಸಾವಿನ ರೀತಿಯು ವ್ಯತ್ಯಾಸವಾಗುತ್ತದೆ. ಮುಂದೆ ಸೂಚಿಸುವ ಗ್ರಹಸ್ಥಿತಿ ಗಳಲ್ಲಿ ಗ್ರಹಯುತಿ ಆದಾಗೆಲ್ಲ ಗ್ರಹದೃಷ್ಟಿ ಎಂಬುದೂ ಸ್ವತಃವಿವ ಆಧ್ಯಾಹೃತವಾಗುತ್ತದೆ. ಲಗ್ನದಿಂದಲೋ ಆತ್ಮಕಾರಕನಿಂದಲೋ ತೃತೀಯ ವನ್ನು ಸೂರ್ಯ ಕೂಡಿದ್ದರೆ (ಅಥವಾ ದೃಷ್ಟಿಸಿದರೆ) ಸಾವು ರಾಜಕೀಯ ಕಾರಣಗಳಿಂದ ಉಂಟಾಗುತ್ತದೆ, ಅಂದರೆ, ಗಲ್ಲು, ಶಿರಚ್ಛೇದ ಇತ್ಯಾದಿ. ಕುಜ—ಬೆಂಕಿ, ಆಯುಧ ಗಾಯನ ; ಶನಿ ಮತ್ತು ಗುಳಿಕ—ಗಟ್ಟಿಯ ಜೀರ್ಣ ವಾಗದಂಥ ಗಟ್ಟಿ ಪದಾರ್ಥ ಸೇವನೆ; ಕಾರಕಾಂಶದಲ್ಲಿ ರಾಹು ಮತ್ತು ಸೂರ್ಯ ಇದ್ದರೆ, ಹಾವು ಕಡಿದು ಸಾವುಂಟಾಗುತ್ತದೆ.

ಲಗ್ನದಿಂದ ಅಥವಾ ಆತ್ಮಕಾರಕನಿಂದ ತೃತೀಯವು ಚಂದ್ರನಿಂದ ಕೂಡಿದ್ದರೆ (ಅಥವಾ ವೀಕ್ಷಿತವಾಗಿದ್ದರೆ) ಕ್ಷಯದಿಂದ ಸಾವುಂಟಾಗುತ್ತದೆ. ಶನಿ —ವಾತರೋಗ, ಸಂಧಿವಾತ ; ಕೇತು—ಜಲೋದರ ಮುಂತಾದ ಜಲ ರೋಗಗಳು ; ಗುರು—ಅಜೀರ್ಣ, ವಾಂತಿ, ಶ್ಲೇಷ್ಮ ; ಶುಕ್ರ—ರತಿರೋಗ, ಪರಂಗಿ ರೋಗ. ಶುಕ್ಲ ವ್ಯಾಧಿ. ತೃತೀಯದ ಸಂಬಂಧವನ್ನು ಅನೇಕ ಗ್ರಹ ಗಳು ಪಡೆದಿದ್ದರೆ. ಹಲವಾರು ರೋಗಗಳಿಂದಲೂ ರೋಗಗಳು ಜಟಿಲವಾಗು ವುದರಿಂದಲೂ ಸಾವುಂಟಾಗುತ್ತದೆ.

ಸಾವಿನ ಮನೆಯಾದ ತೃತೀಯವು (ಲಗ್ನದಿಂದ ಅಥವಾ ಆತ್ಮಕಾರಕ ನಿಂದ) ಶುಭ ಗ್ರಹಯುಕ್ತವಾಗಿದ್ದರೆ, ಸಾವು ತೀರ್ಥಕ್ಷೇತ್ರಗಳಲ್ಲಿ, ದೇವಾಲಯದ ಬಳಿ, ಚರ್ಚ್, ಮಸೀದಿ ಮುಂತಾದ ಪವಿತ್ರ ಕ್ಷೇತ್ರಗಳ ಬಳಿ

ಉಂಟಾಗುತ್ತದೆ. ಪಾಪಿಗಳು ತೃತೀಯದಲ್ಲಿದ್ದರೆ. ಕೆಟ್ಟ ವಾತಾವರಣದಲ್ಲಿ ಸಾವು ಸಂಭವ ಅಂದರೆ ಪಾಪಕಾರ್ಯ ಜರುಗುವ ಕಡೆಗಳಲ್ಲಿ ಸಾಯುವ ಕಾಲ ದಲ್ಲಿ ವ್ಯಕ್ತಿ ಪ್ರಜ್ಞೆ ಪಡೆದಿರುವುದು ಅಥವಾ ಪ್ರಜ್ಞಾಹೀನನಾಗಿರುವುದು. ತೃತೀಯವು ಗುರು ಶುಕ್ರರಿಂದ ಕೂಡಿರುವುದನ್ನೋ (ಅಥವಾ ವೀಕ್ಷಿತವಾಗಿರು ವುದನ್ನೋ) ಇಲ್ಲವೆ ಇತರೇ ಗ್ರಹಗಳಿಂದ ಕೂಡಿ ಅಥವಾ ವೀಕ್ಷಿತವಾಗಿ ಇರುವುದನ್ನು ಅವಲಂಬಿಸುತ್ತದೆ.

ನಲವತ್ತನೆಯ ಉದಾಹರಣೆ: **ಮಾದರಿ ಜಾತಕದಲ್ಲಿ ಸಾವಿನ ಮೂಲ ವನ್ನು ಕಂಡುಹಿಡಿಯಿರಿ.**

ತೃತೀಯವು ಮಿಥುನ. ಶುಭರಾಶಿ. ಅದರಲ್ಲಿ ಪಾಪಗ್ರಹಗಳಿಲ್ಲ. ವ್ಯಕ್ತಿಗೆ ಸ್ವಾಭಾವಿಕವಾದ ಮರಣವುಂಟಾಗಬೇಕು. ತೃತೀಯವನ್ನು ಮೂರು ಗ್ರಹ ಗಳು— ಸೂರ್ಯ ಬುಧ ಮತ್ತು ಗುರು—ವೀಕ್ಷಿಸುತ್ತಾರೆ. ಗುರುವೇ ಈ ಪೈಕಿ ಅತ್ಯಂತ ಪ್ರಬಲ, ವ್ಯಕ್ತಿಯ ಅಂತ್ಯವು ಶ್ಲೇಷ್ಮದಿಂದ ಉಂಟಾಯಿತು. ಕಡೆತನಕ ಆತ ಜ್ಞಾನವಾಗಿದ್ದನು.

## 138. ಜೈಮಿನಿ ಪದ್ಧತಿಯಲ್ಲಿ ಯೋಗಗಳು

ಜೈಮಿನಿ ಪದ್ಧತಿಯ ಯೋಗಗಳನ್ನು ಅನುಕೂಲಕ್ಕೋಸ್ಕರ ಮೂರು ವಿಂಗಡಗಳಾಗಿ ಭಾವಿಸುತ್ತೇನೆ. ಅವು ಯಾವುವೆಂದರೆ ; ರಾಜ ಯೋಗಗಳು, ಅರಿಷ್ಟಯೋಗಗಳು ಮತ್ತು ಸಂಮಿಶ್ರ ಯೋಗಗಳು—ಈ ಕಡೆಯ ಗುಂಪಿನಲ್ಲಿ ಸನ್ಯಾಸ ಯೋಗ, ವಾಹನ ಯೋಗ ಮುಂತಾದುವು ಸೇರಿವೆ.

## 139. ರಾಜ ಯೋಗಗಳು

ಜನ್ಮಲಗ್ನ ಹೋರಾಲಗ್ನ ಘಟಿಕಾಲಗ್ನ ಗ್ರಹ ವೀಕ್ಷಿತವಾದರೆ ಪ್ರಬಲ ರಾಜಯೋಗವುಂಟಾಗುತ್ತದೆ. ಜಾತಕನು ರಾಜನಾಗುತ್ತಾನೆ ಅಥವಾ ರಾಜ ಸಮಾನನಾಗುತ್ತಾನೆ. ಈ ಪೈಕಿ ಒಂದೋ ಎರಡೋ ಲಗ್ನಗಳು ವೀಕ್ಷಿತ ವಾದರೆ, ಆಗ ಯೋಗವುಂಟಾಗುವುದಿಲ್ಲ. ಮೂರು ಲಗ್ನಗಳನ್ನೂ ಒಂದೇ ಗ್ರಹವು ಕಾಣಬೇಕೋ ಬೇರೆ ಬೇರೆ ಗ್ರಹಗಳು ಕಾಣಬೇಕೋ ಸ್ಪಷ್ಟವಾಗಿಲ್ಲ.

ರಾಶಿ ದ್ರೇಕ್ಕಾಣ ನವಾಂಶಗಳಲ್ಲಿ ಲಗ್ನವೂ ಸಪ್ತಮವೂ ಗ್ರಹದಿಂದ ಕೂಡಿದ್ದರೆ ಅಥವಾ ವೀಕ್ಷಿತವಾದರೆ ರಾಜಯೋಗವುಂಟಾಗುತ್ತದೆ. ವ್ಯಕ್ತಿಯು ರಾಜನಾಗುತ್ತಾನೆ. ಯೋಗದ ಪ್ರಾಬಲ್ಯವು ಗ್ರಹದ ದೃಷ್ಟಿ ಅಥವಾ

ಯುತಿಯು ಆರು ಅಂಶಗಳಲ್ಲೂ ಇಲ್ಲವಾದರೆ ಕುಗ್ಗುತ್ತದೆ. ಒಂದೇ ಗ್ರಹವು ವೀಕ್ಷಿಸಿದರೆ, ಯೋಗವು ಸರ್ವೋತ್ಕೃಷ್ಟವಾಗುತ್ತದೆ.

ನವಾಂಶ ಅಥವಾ ದ್ರೇಕ್ಕಾಣ ಕುಂಡಲಿಯಲ್ಲಿ ಜನ್ಮ ಲಗ್ನ, ಹೋರಾ ಲಗ್ನ, ಘಟಿಕಾ ಲಗ್ನಗಳು ಗ್ರಹಯುತಿಯನ್ನೋ ಗ್ರಹವೀಕ್ಷಣವನ್ನೋ ಪಡೆದರೆ, ರಾಜಯೋಗವುಂಟಾಗುತ್ತದೆ. ಮೇಲಿನ ಎಲ್ಲ ಪ್ರಕರಣಗಳಲ್ಲೂ ಪ್ರಬಲ ರಾಜ ಯೋಗವು ಸಂಭವಿಸುವಂತಾಗಬೇಕಾದರೆ ಮೂರು ಅಂಶಗಳೂ, ಒಂದೆರಡು ಅಲ್ಲಿ, ಗ್ರಹಸಂಬಂಧವನ್ನು ಪಡೆದಿರಬೇಕು. ಅರ್ಥಾತ್ — ಇದನ್ನು ವ್ಯಾಖ್ಯಾನಕಾರರೂ ಸಮರ್ಥಿಸುತ್ತಾರೆಂದು ತೋರುತ್ತದೆ—ಒಂದು ಅಂಶವು (ಲಗ್ನ ಅಥವಾ ಹೋರಾ ಲಗ್ನ ಅಥವಾ ಘಟಿಕಾ ಲಗ್ನ) ಸಂದರೆ, ಯೋಗವು ಹೆಸರಿಗೆ ಮಾತ್ರ ಇರುತ್ತದೆ. ಕೆಲವು ವ್ಯಾಖ್ಯಾನಕಾರರ ಪ್ರಕಾರ ಮೂರು ಅಂಶಗಳೂ ಒಂದೇ ಗ್ರಹದ ದೃಷ್ಟಿಗೆ ಒಳಗಾಗಿರಬೇಕು. ಕುಜ ಶುಕ್ರ ಕೇತು ಪರಸ್ಪರ ನೋಡಿದರೆ ಅಥವಾ ಪರಸ್ಪರ ತೃತೀಯದಲ್ಲಿದ್ದರೆ ಸಾಧಾರಣ ರಾಜಯೋಗವು–ವೈತಾಣಿಕ ಎಂಬ ಹೆಸರಿನ ಯೋಗವು–ಉಂಟಾಗಿ ಜಾತಕ ನಿಗೆ ಕೀರ್ತಿಯನ್ನೂ ಪ್ರಶಸ್ತಿಯನ್ನೂ ನೀಡುತ್ತದೆ.

ರಾಜಯೋಗಗಳು ಮುಂದೆ ಸೂಚಿಸಿರುವ ಉಪಾಧಿಗಳಲ್ಲಿ ಉಂಟಾಗು ತ್ತವೆ :—

(1) ಆತ್ಮಕಾರಕನಿಂದ ದ್ವಿತೀಯ ಚತುರ್ಥ ಪಂಚಮಗಳು ಏಕಪ್ರಕಾರ ವಾಗಿ ಪ್ರಬಲವಾಗಿದ್ದರೆ ಅಥವಾ ಶುಭಗಳಿಂದ ಕೂಡಿದ್ದರೆ, (2) ಆತ್ಮಕಾರಕ ನಿಂದ ತೃತೀಯ ಷಷ್ಠಗಳು ಸಮಾನ ಪ್ರಾಬಲ್ಯ ಹೊಂದಿದ್ದರೆ ಅಥವಾ ಪಾಪ ಗ್ರಹಗಳಿಂದ ಕೂಡಿದ್ದರೆ, (3) ಲಗ್ನಾಧಿಪತಿಯಿಂದಲೋ ಸಪ್ತಮಾಧಿಪತಿ ಯಿಂದಲೋ ದ್ವಿತೀಯ ಚತುರ್ಥ ಪಂಚಮಗಳು ಶುಭ ಗ್ರಹಗಳ ಯುತಿ ಯನ್ನೋ ದೃಷ್ಟಿಯನ್ನೋ ಪಡೆದಿದ್ದರೆ ರಾಜಯೋಗವುಂಟಾಗುತ್ತದೆ. ಈ ಪ್ರಭಾವಗಳು ಮಿಶ್ರವಾಗಿದ್ದರೆ, ಅಂಥ ವ್ಯಕ್ತಿ ರಾಜ ಸಮಾನನಾಗುತ್ತನೆಯೇ ವಿನಾ ರಾಜನಾಗುವುದಿಲ್ಲ.

ಕಾರಕಾಂಶದಲ್ಲಿ ಶುಕ್ರ ಸ್ಥಾನವು ಕುಂಬ ಪುರಸ್ಸವೆಂದು ಭಾವಿಸಲ್ಪಟ್ಟಿದೆ. ಅಪಾರ ಸಂಪದವನ್ನೂ ಆಯುಸ್ಸನ್ನೂ ಅದು ಕೊಡುತ್ತದೆಂದು ಹೇಳಿದೆ.

ಮುಂದೆ ಕೊಟ್ಟಿರುವ ರಾಜಯೋಗಗಳು ನಾನಾ ಅಂತಸ್ತಿನ ರಾಜಕೀಯ ಅಧಿಕಾರ ಕೀರ್ತಿ ಪ್ರತಿಷ್ಠೆಗಳನ್ನು ಅವುಗಳ ಪ್ರಾಬಲ್ಯದ ಪ್ರಕಾರ ನೀಡುತ್ತವೆ.

(1) ಲಗ್ನಾಧಿಪತಿ ಪಂಚಮಾಧಿಪತಿಗಳು ಕೂಡಿದ್ದು, ನವಾಂಶಗಳಲ್ಲಿ ಉಚ್ಚವೋ ನೀಚವೋ ಆಗಿರಬೇಕು—ಮಹಾರಾಜಾಧಿರಾಜ.

(2) ಯೋಗವು ಲಗ್ನಾಧಿಪತಿ ಮತ್ತು ಪಂಚಮಾಧಿಪತಿ ಅಥವಾ ಸಪ್ತಮ ಪಂಚಮಾಧಿಪತಿಗಳು ಇವರ ಸಂಬಂಧ ಮಾತ್ರದಿಂದ ಉದ್ಧರಿಸಿದ್ದರೆ ಫಲವು ಉತ್ತರ ವಯಸ್ಸಿನಲ್ಲಿ ಉಂಟಾಗುತ್ತದೆ.

(3) ಶುಕ್ರ ಕುಜ ಕೇತು ಕ್ರಮವಾಗಿ ಆತ್ಮಕಾರಕ ರಾಶಿ. ಅಲ್ಲಿಂದ ದ್ವಿತೀಯ ಚತುರ್ಥಗಳಲ್ಲಿದ್ದರೆ—ರಾಜ.

(4) ಲಗ್ನ ಸಪ್ತಮ ನವಮಗಳು ಪ್ರಬಲವಾಗಿದ್ದರೆ, ರಾಜಕೀಯ ಅಧಿಕಾರ.

(5) ಲಗ್ನ ಸಪ್ತಮ ಎರಡರಲ್ಲೂ ಸಮಾನ ಸಂಖ್ಯೆಯ ಗ್ರಹಗಳಿದ್ದರೆ ಉಂಟಾಗುವ ರಾಜಯೋಗವು ಉತ್ತರ ವಯಸ್ಸಿನಲ್ಲಿ ಅನುಭವವಾಗುತ್ತದ.

(6) ಲಗ್ನದಲ್ಲಿ ಚತುರ್ಥದಲ್ಲಿ ಸಮಾನ ಸಂಖ್ಯೆಯ ಗ್ರಹಗಳು—ಕೀರ್ತಿ ಗೌರವ.

(7) ಲಗ್ನದಲ್ಲಿ ಗುರು, ಏಕಾದಶದಲ್ಲಿ ಚಂದ್ರ ಅಥವಾ ಲಗ್ನದಲ್ಲಿ ಗುರು, ಸಪ್ತಮದಲ್ಲಿ ಚಂದ್ರ ಶುಭವೀಕ್ಷಿತರಾದರೆ—ಪ್ರಭು.

(8) ಲಗ್ನದಲ್ಲಿ ಬುಧ, ಏಕಾದಶದಲ್ಲಿ ಗುರು ಅಥವಾ ಲಗ್ನದಲ್ಲಿ ಬುಧ, ಸಪ್ತಮದಲ್ಲಿ ಗುರು ಶುಭವೀಕ್ಷಿತರಾದರೆ ರಾಜಯೋಗವು ಪೂರ್ವ ವಯಸ್ಸಿನಲ್ಲೇ ಅನುಭವಕ್ಕೆ ಬರುತ್ತದೆ.

(9) ಶುಕ್ರ ಚಂದ್ರರು ಆತ್ಮಕಾರಕನ ಸಂಗಮವಿದ್ದರೆ, ಅಥವಾ ಆತ್ಮಕಾರಕನನ್ನು ವೀಕ್ಷಿಸಿದರೆ ಅಥವಾ ಆತ್ಮಕಾರಕನಿಂದ ದಶಮವನ್ನು ವೀಕ್ಷಿಸಿದರೆ—ರಾಜಯೋಗ.

(10) ಸಪ್ತಮ ಚಂದ್ರನ ಸಂಗಡ ಶುಭಗ್ರಹಗಳಿದ್ದರೆ ಅಥವಾ ಸಪ್ತಮ ಚಂದ್ರನನ್ನು ಶುಭಗ್ರಹಗಳು ವೀಕ್ಷಿಸಿದರೆ—ರಾಜಸೇವಕ.

(11) ತ್ರಿಕೋಣ ಕೇಂದ್ರಗಳು ಶುಭರಹಿತವಾಗಿದ್ದರೆ—ರಾಜಸೇವಕ.

(12) ಶುಭಗ್ರಹಗಳು ಅಥವಾ ಶುಭವರ್ಗ ಸಹಿತರಾದ ಗ್ರಹಗಳು ಆತ್ಮಕಾರಕ ರಾಶಿಯಲ್ಲೋ ಅಥವಾ ಅಲ್ಲಿಂದ ದಶಮದಲ್ಲೋ ಇದ್ದರೆ—ಸಾಮಾನ್ಯ ರಾಜಯೋಗ.

(13) ನವಾಂಶದಲ್ಲಿ ಗುರುವಿನಿಂದ ಚತುರ್ಥದಲ್ಲೋ ಏಕಾದಶದಲ್ಲೋ ಚಂದ್ರ ಇದ್ದರೆ— ಕೀರ್ತಿ ಅಧಿಕಾರ.

(14) ಜನ್ಮರಾಶಿಯಲ್ಲೂ ನವಾಂಶದಲ್ಲಿ ಜನ್ಮರಾಶಿಯಿಂದ ಏಕಾದಶ ದಶಮಗಳಲ್ಲೂ ಶುಭಗ್ರಹಗಳು—ಸುಮಾರಾಗಿ ಪ್ರಬಲವಾದ ರಾಜಯೋಗ.

(15) ಲಗ್ನ ಆತ್ಮಕಾರಕ ರಾಶಿಗಳಲ್ಲಿ ಉಚ್ಚಗ್ರಹ ಅಥವಾ ಆ ರಾಶಿಗಳು ಉಚ್ಚಗ್ರಹ ವೀಕ್ಷಿತ—ಪ್ರಭು.

(16) ಆತ್ಮಕಾರಕನ ನವಾಂಶರಾಶಿಯು ಲಗ್ನ ಅಥವಾ ಜನ್ಮರಾಶಿ ಅಥವಾ ಗುರುವಿರುವ ರಾಶಿಯಾಗಿದ್ದರೆ—ಉಚ್ಚಮಟ್ಟದ ರಾಜಯೋಗ.

(17) ಆರೂಢ ಲಗ್ನದಲ್ಲೂ ನವಮದ ನವಾಂಶರಾಶಿಯಲ್ಲೂ ಸಮಾನ ಸಂಖ್ಯೆಯ ಶುಭಗ್ರಹಗಳು—ರಾಜಕೀಯ ಅಧಿಕಾರ.

(18) ಆತ್ಮಕಾರಕನಿಂದಲೋ ಆರೂಢ ಲಗ್ನದಿಂದಲೋ ತೃತೀಯ ಷಷ್ಠಗಳಲ್ಲಿ ಪಾಪಗ್ರಹಗಳು—ಪ್ರಭು.

ರಾಜಯೋಗಗಳ ಮುಖವು ಸ್ಪಷ್ಟವಾಗಿ ಉಕ್ತವಾಗದೆ ಇರುವಾಗ, ಅದನ್ನು ಲಗ್ನದಿಂದಲೂ ಆತ್ಮಕಾರಕನಿಂದಲೂ ಪಂಚಮದಿಂದಲೂ ಪರಿಭಾವಿಸ ಬೇಕು ಎಂದು ಜೈಮಿನಿ ನಮಗೆ ಸೂಚಿಸುತ್ತಾನೆ.

ಜೈಮಿನಿ ಪ್ರೋಕ್ತವಾದ ರಾಜಯೋಗಗಳು ಪ್ರಚುರವಾಗಿಲ್ಲವಾದ ಕಾರಣ ಪ್ರಯೋಗ ಪರೀಕ್ಷೆಗೊಳಗಾಗಿಲ್ಲ. ವಾಚಕರು ಸ್ವಪ್ರಯತ್ನದಿಂದ ವಿವಿಧ ಯೋಗಗಳನ್ನು ವಾಸ್ತವ ಜಾತಕಗಳಿಗೆ ಅನ್ವಯಿಸಿ ಕೀರ್ತಿ ಅಧಿಕಾರಗಳನ್ನು ಮುನ್ನುಡಿಯಲು ಅವನ್ನು ಎಷ್ಟುಮಟ್ಟಿಗೆ ಪ್ರಯೋಗಿಸಬಹುದು ಎಂಬುದನ್ನು ತಾವೇ ಕಂಡುಕೊಳ್ಳಬೇಕು.

ನಲವತ್ತೊಂದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಯಾವುದಾದರೂ ರಾಜಯೋಗಗಳಿದ್ದರೆ ವಿವರಿಸಿ.**

(1) ಜನ್ಮಲಗ್ನವು ಕುಜ ಕೇತು ವೀಕ್ಷಿತ. ಹೋರಾ ಲಗ್ನ ಘಟಿಕಾ ಲಗ್ನಗಳೆರಡನ್ನೂ ಗುರು ಸೂರ್ಯ ಬುಧರು ವೀಕ್ಷಿಸುತ್ತಾರೆ—ಆದಕಾರಣ ಸುಮಾರು ಪ್ರಬಲವೇ ಆದ ರಾಜಯೋಗವುಂಟಾಗುತ್ತದೆ.

(2) ನವಾಂಶ ಲಗ್ನ, ಹೋರಾ ಲಗ್ನ, ಘಟಿಕಾ ಲಗ್ನಗಳಲ್ಲಿ ಕ್ರಮವಾಗಿ ಗುರು, ರಾಹು, ಕೇತುಗಳು ಇದ್ದಾರೆ. ಸುಮಾರಾಗಿ ಪ್ರಬಲವಾದ ರಾಜಯೋಗ.

(3) ದಶಮ ಕೇಂದ್ರ ವಿನಾ ಬಾಕಿ ಕೇಂದ್ರ ತ್ರಿಕೋಣಗಳು ಶುಭಗ್ರಹ ರಹಿತವಾಗಿವೆ.

(4) ಕಾರಕಾಂಶವು ಜನ್ಮರಾಶಿಯೆ.

ಜಾತಕನು ಅಧಿಕಾರ ಪ್ರಯೋಗವನ್ನು ಬಿಟ್ಟು ಉಳಿದೆಲ್ಲಾ ರಾಜಯೋಗ ಫಲಗಳನ್ನೂ ಅನುಭವಿಸಿದನು ಎಂಬುದು ವಾಚಕರಿಗೆ ಆಸಕ್ತಿಯ ವಿಷಯ ವಾಗಬಹುದು.

## 140. ಅರಿಷ್ಟ ಯೋಗಗಳು

ಇವು ಆಪತ್ತುಗಳಿಗೆ ಸಂಬಂಧಪಟ್ಟವು. ಆದರೆ ಈ ವಿಭಾಗದಲ್ಲಿ ಕೆಟ್ಟ ಕೇಡಿಗಳನ್ನೂ ಕೆಡುಕು ಸ್ವಭಾವದವರನ್ನೂ ಸೂಚಿಸುವ ಗ್ರಹಪರಿಸ್ಥಿತಿಗಳನ್ನು ಸೇರಿಸಿದ್ದೇನೆ. ಮುಂದಿನ ಗ್ರಹಪರಿಸ್ಥಿತಿಗಳು ವಿಶೇಷ ಆಸಕ್ತಿಯವು.

ಕಾರಕಾಂಶದಲ್ಲಿ ಕೇತು — ಕಳ್ಳ ; ಕಾರಕಾಂಶದಲ್ಲಿ ಸೂರ್ಯ ರಾಹು ಗಳಿಗೆ ಕುಜ ದೃಷ್ಟಿ — ಬೇರೆಯವರ ಮನೆಗಳಿಗೆ ಬೆಂಕಿ ಹಚ್ಚಿ ಹಿಗ್ಗುವವನು ; ಕಾರಕಾಂಶದಲ್ಲಿ ಕುಜನಿಗೆ ಬುಧ ಶನಿಗಳ ವೀಕ್ಷಣ — ಷಂಡ ; ಕಾರಕಾಂಶದಿಂದ ನವಮದಲ್ಲಿ ಶುಕ್ರ ಕುಜರ ಷಡ್ವರ್ಗ ಪ್ರಾಬಲ್ಯ — ಹೆಂಡತಿಯಲ್ಲದೆ ಬೇರೆ ಹೆಂಗಸರಲ್ಲಿ ಭೋಗ ; ಕಾರಕಾಂಶದಿಂದ ನವಮವು ಗುರುಯುತವೋ ವೀಕ್ಷಿತವೋ ಆದರೆ ಹೆಣ್ಣಿಗೆ ಅಧೀನ ; ಜನ್ಮಲಗ್ನದಿಂದಲೋ ಜನ್ಮಾರೂಢ ದಿಂದಲೋ ದ್ವಿತೀಯ ಅಷ್ಟಮಗಳಲ್ಲಿ ಪಾಪಿಗಳು — ದುರದೃಷ್ಟ, ದಾರಿದ್ರ್ಯ ; ಲಗ್ನಾರೂಢದಿಂದ ದ್ವಾದಶದಲ್ಲಿ ಬುಧ — ಕೋರ್ಟು ತಕರಾರಿನಿಂದ ಧನನಷ್ಟ; ದ್ವಿತೀಯ ದ್ವಾದಶ ಅಥವಾ ಪಂಚಮ, ನವಮ ಅಥವಾ ದ್ವಾದಶ ಷಷ್ಠ ಅಥವಾ ದಶಮ ಚತುರ್ಥ ಈ ಸ್ಥಾನಗಳಲ್ಲಿ ಸಮಾನ ಸಂಖ್ಯೆಯ ಗ್ರಹಗಳು — ಕಾರಾಗೃಹವಾಸ ; ದ್ವಿತೀಯ ನವಮಗಳಲ್ಲಿ ಸಮಾನ ಸಂಖ್ಯೆಯ ಗ್ರಹ ಗಳು — ಘೋರ ವಿಪತ್ತು ; ಪಂಚಮಾರೂಢದಲ್ಲಿ ರಾಹು ಸೂರ್ಯವೀಕ್ಷಿತ — ದೃಷ್ಟಿನಾಶ ; ಕಾರಕಾಂಶಕ್ಕೆ ಶನಿ ಷಡ್ವರ್ಗಗಳು ಅಥವಾ ಕಾರಕಾಂಶಕ್ಕೆ ಶನಿ ರಾಹು ಮತ್ತಿತರ ಪಾಪಿ ಸಂಬಂಧ — ಅಕ್ರಮ ಸಂತಾನ ; ಕಾರಕಾಂಶ ದಲ್ಲಿ ಗುಳಿಕನಿದ್ದರೆ ಇತರರಿಗೆ ವಿಷ ಉಣಿಸುತ್ತಾನೆ ಜಾತಕ, ಅಥವಾ ತಾನೇ ವಿಷ ಸೇವಿಸಿ ಸಾಯುತ್ತಾನೆ.

## 141. ಇತರೆ ಯೋಗಗಳು

ಇಲ್ಲಿ ಶೇಖರಿಸಿ ಕೊಟ್ಟಿರುವ ಗ್ರಹಪರಿಸ್ಥಿತಿಗಳು ಕೇವಲ ಲೌಕಿಕದಲ್ಲಿ ಅಲ್ಲದೆ ಇತರೆ ವಿಷಯಗಳಲ್ಲೂ ಆಸಕ್ತರಾದವರಿಗೆ ಕುತೂಹಲವನ್ನು ಪೂರೈಸಲು ಉಪಯುಕ್ತವಾದಾವು.

ಜಾತಕನಿಗೆ ವಾಹನಗಳು ಮತ್ತು ಕುದುರೆಗಳು ಪ್ರಾಪ್ತವಾಗಬೇಕಾದರೆ ಚಂದ್ರ ಶುಕ್ರರು ಪರಸ್ಪರ ಅವಲೋಕಿಸಬೇಕು ಅಥವಾ ಚಂದ್ರನು ಶುಕ್ರನಿಂದ

ತೃತೀಯದಲ್ಲಿರಬೇಕು ಅಥವಾ ಇಬ್ಬರೂ ದ್ವಿತೀಯದಲ್ಲಿರಬೇಕು. ಚಂದ್ರ ಶುಕ್ರರು ಕಾರಕಾಂಶದಿಂದ ಚತುರ್ಥವನ್ನು ನೋಡಿದರೆ ಒಳ್ಳೆ ಕುದುರೆಗಳು ಲಭಿಸುತ್ತವೆ. ಕಾರಕಾಂಶದಿಂದ ಚತುರ್ಥದಲ್ಲಿ ರಾಹು ಶನಿಗಳಿದ್ದರೆ, ಕಲ್ಲಿನಲ್ಲಿ ಕಟ್ಟಿದ ಮನೆ ಲಭಿಸುತ್ತದೆ, ಕುಜ ಕೇತುಗಳಿದ್ದರೆ ಇಟ್ಟಿಗೆಯಲ್ಲಿ ಕಟ್ಟಿದ ಮನೆ ದೊರಕುತ್ತವೆ. ಸೂರ್ಯ ಚತುರ್ಥದಲ್ಲಿದ್ದರೆ ಹುಲ್ಲು ಜೋಪಡಿ, ಮುಂತಾದ ಅವಸರದಲ್ಲಿ ಕಟ್ಟಿದ ಕಟ್ಟಡಗಳೇ ಜಾತಕನ ಪಾಲಿನದು.

ಉಪಪದದಿಂದ ದ್ವಿತೀಯದಲ್ಲಿ ಪಾಪಿಗಳಿದ್ದರೆ, ತಾಪಸಿಯು ಸೂಚಿತ. ಚಂದ್ರನೂ ಸಪ್ತಮವೂ ಶುಭಗ್ರಹಯುತವಾಗಿದ್ದರೆ, ಜಾತಕನು ಮಹಂತ ಅಥವಾ ಮಠಾಧಿಪತಿ ಆಗುತ್ತಾನೆ.

ಕುಂಭ ನವಾಂಶದಲ್ಲಿ ಆತ್ಮಕಾರಕನಿದ್ದರೆ, ಜಾತಕನು ಕೆರೆ, ಛತ್ರ, ಉದ್ಯಾನಗಳನ್ನು ಜನಸೌಕರ್ಯಕ್ಕಾಗಿ ನಿರ್ಮಿಸುತ್ತಾನೆ. ಕಾರಕಾಂಶವು ಮೀನ ವಾದರೆ ಧರ್ಮಕಾರ್ಯ ಪರೋಪಕಾರಿ ಕಾರ್ಯಗಳನ್ನು ನಡೆಸುತ್ತಾನೆ. ಕಾರಕಾಂಶದಿಂದ ದ್ವಾದಶದಲ್ಲಿ ಶುಭರಿದ್ದರೆ ಅಥವಾ ಕಾರಕಾಂಶ ಮೇಷವಾಗಿ ಅಥವಾ ಧನುಸ್ ಆಗಿ ಕೇತುಯುಕ್ತವಾಗಿದ್ದರೆ ಜಾತಕನಿಗೆ ಮೋಕ್ಷವುಂಟಾಗು ತ್ತದೆ. ಕಾರಕಾಂಶಕ್ಕೆ ಸೂರ್ಯ, ಚಂದ್ರ, ಶುಕ್ರ, ಕುಜ, ಬುಧ, ಗುರು, ಕೇತು ಇವರ ಸಂಬಂಧವು ಇದ್ದರೆ, ಜಾತಕನು ಕ್ರಮವಾಗಿ ಶಿವ, ಗೌರಿ, ಲಕ್ಷ್ಮಿ, ಷಣ್ಮುಖ, ವಿಷ್ಣು, ಸಾಂಬಶಿವ, ದುರ್ಗ, ಗಣಪತಿ ಈ ದೇವತೆಗಳ ಭಕ್ತನಾಗು ತ್ತಾನೆ. ಕಾರಕಾಂಶವು ಸ್ಥಿರರಾಶಿಯಾಗಿ ಶನಿ ಅಥವಾ ಶುಕ್ರರಿಂದ ಕೂಡಿದ್ದರೆ ಜಾತಕನು ಕ್ಷುದ್ರದೇವತೆಗಳ ಉಪಾಸಕನಾಗುತ್ತಾನೆ. ಅಮಾತ್ಯಕಾರಕ ಕಾರಕಾಂಶ ದಲ್ಲಿದ್ದರೂ ಇದೇ ಫಲವುಂಟಾಗುತ್ತದೆ. ಕಾರಕಾಂಶದಿಂದ ಪಂಚಮದಲ್ಲೂ ನವಮದಲ್ಲೂ ಒಟ್ಟೊಬ್ಬ ಪಾಪಗ್ರಹವಿದ್ದರೆ, ಆ ವ್ಯಕ್ತಿ ಮಂತ್ರವಾದಿಯಾಗು ತ್ತಾನೆ. ದೇವತಾಕಾರಕನಿಂದ ಜಾತಕ ದೈವಭಕ್ತಿಯು ವಿಚಾರವನ್ನು ತಿಳಿಯ ಬೇಕು. ದೇವತಾಕಾರಕ ಶುಭನಾದರೆ ಶುಭದೇವತೆಯನ್ನೂ ಪಾಪಿಯಾದರೆ ಕ್ರೂರ ದೇವತೆಯನ್ನೂ ಜಾತಕನು ಆರಾಧಿಸುತ್ತಾನೆ. ದೇವತಾಕಾರಕನು ಉಚ್ಚನೋ ಬೇರೆ ವಿಧದಲ್ಲಿ ಪ್ರಬಲನೋ ಆಗಿದ್ದರೆ ಜಾತಕನು ನೈಜಭಕ್ತನಾಗು ತ್ತಾನೆ; ನೀಚನೋ ಬೇರೆ ರೀತಿಯಲ್ಲಿ ದುರ್ಬಲನೋ ಆಗಿದ್ದರೆ ಠಕ್ಕುಭಕ್ತ ನಾಗುತ್ತಾನೆ.

# ಘಟನೆಗಳ ಕಾಲ ನಿರ್ಣಯ

## 142 ಸಾಮಾನ್ಯ ಪರಿಶೀಲನೆ

ಭವಿಷ್ಯ ಘಟನೆಗಳನ್ನು ಕುರಿತೇಟಾಗಿ ನುಡಿಯುವುದು ಕಬ್ಬಿಣದ ಕಡಲೆ. ಜನ್ಮಕುಂಡಲಿಯು ಇಡೀ ಜೀವಿತಕ್ಕೇ ಪ್ರಾಮುಖ್ಯವುಳ್ಳದ್ದು. ಪರಾಶರು ಹೇಳುವಂತೆ, ನಾನಾ ಗ್ರಹಪರಿಸ್ಥಿತಿಗಳ ಫಲಗಳು ವಿವಿಧ ದಶಾಭುಕ್ತಿಗಳ ಕಾಲದಲ್ಲಿ ಸಲ್ಲುವ ಗೋಚಾರದ ಪ್ರಭಾವಕ್ಕೆ ಅನುಗುಣವಾಗಿ ಲಭಿಸುತ್ತವೆ. ಜೈಮಿನಿ ಪದ್ಧತಿಯಲ್ಲಿ ಕಾಲ ನಿರ್ಣಯಕ್ಕೆ ಸಂಬಂಧಪಟ್ಟಂತೆ ವಿಶಿಷ್ಟವಾದ ಸಮಗ್ರ ವಿಧಾನವೇ ಇದೆ. ಗ್ರಹ ದಶೆ ಅಥವಾ ಗೋಚಾರದ ಸೊಲ್ಲೇ ಇಲ್ಲಿಲ್ಲ ವಾದರೂ ಜೈಮಿನಿ ಸಂಪ್ರದಾಯಕ್ಕೆ ಸೇರಿದ **ಜಾತಕ ರಾಜೀಯ** ಮತ್ತು **ವಾಂಛನಾಥೀಯ** ಗ್ರಂಥಗಳಲ್ಲಿ ರಾಶಿ ದಶೆಗಳು ಗೋಚಾರದಿಂದ ಪ್ರಭಾವಿತ ವಾಗುತ್ತವೆ ಎಂಬ ಸೂಚನೆಗಳು ಕಂಡುಬರುತ್ತವೆ. ಜೈಮಿನಿಯಲ್ಲಿ ಹಲವು ದಶೆಗಳುಂಟು ; ಇವನ್ನು ಕುರಿತು ಅಂಕ 72ರಲ್ಲಿ ಪ್ರಸ್ತಾಪ ಮಾಡಿದೆ. ವಿವಿಧ ಘಟನೆಗಳಿಗೆ ಯಾವ ಯಾವ ದಶಾ ವಿಧಾನಗಳನ್ನು ಅನ್ವಯಿಸಬೇಕು. ಆ ಅನ್ವಯಕ್ಕೆ ಯಾವ ಉಪಾಧಿಗಳು ಇರತಕ್ಕವು ? ಈ ಬಗ್ಗೆ ಭಾಷ್ಯಕಾರರು ಯಾವ ಸ್ಪಷ್ಟವಾದ ಸೂಚನೆಗಳನ್ನೂ ಕೊಟ್ಟಿಲ್ಲ. ಅಲ್ಲಿ ಇಲ್ಲಿ ಕಾಣಬರುವ ಸುಳಿವುಗಳ ಆಧಾರದ ಮೇಲೆ ನಾವು ವೈಯಕ್ತಿಕ ತೀರ್ಮಾನಕ್ಕೆ ಬರಬೇಕಾಗಿದೆ. ನನಗೆ ಕೆಲವು ಪಂಡಿತರ ಸಂಗಡ ಚರ್ಚಿಸುವ ಸದವಕಾಶವಿತ್ತು. ಆದರೆ ಅವರು ಅಭಿಪ್ರಾಯಭೇದಗಳನ್ನು ಪಡೆದಿದ್ದಾರೆ. ಚರದಶೆಯೇ ಮಹರ್ಷಿಗೆ ಮೆಚ್ಚು ; ಅದರ ಪ್ರಕಾರ ಸಮಸ್ತ ಘಟನೆಗಳನ್ನೂ ಮುನ್ನುಡಿಯಬಹುದು ಎಂಬುದು ಋಷಿಮತ ಎಂದು ಕೆಲವರು ಹೇಳುತ್ತಾರೆ. ಅದಕ್ಕೆ ಅವರು ಕೊಡುವ ಆಧಾರ ಮೊದಲನೆಯ ಅಧ್ಯಾಯದ ಎರಡನೆ ಪಾದದ 121ನೆಯ

ಸೂತ್ರ. ಆದರಲ್ಲಿ ಜೈಮಿನಿಯು "ಮುಂಚೆ ಹೇಳಿರುವ ಎಲ್ಲ ಗ್ರಹಸ್ಥಿತಿಗಳೂ ವಿವಿಧ ರಾಶಿ ದಶೆಗಳ ಅವಧಿಯಲ್ಲಿ ಅಥವಾ ಪ್ರಾರಂಭದಲ್ಲಿ ಫಲಿಸುತ್ತವೆ" ಎಂದು ಹೇಳುತ್ತಾನೆ. ಈ ಬಗೆಗೆ ನಾನು ಯಾವ ಖಚಿತವಾದ ನೆರವನ್ನೂ ನೀಡಲಾರೆ. ಏಕೆಂದರೆ ಜೈಮಿನಿಯ ವಿವಿಧ ದಶೆಗಳನ್ನು ನಾನು ಅನ್ವಯಿಸಿ ನೋಡಿರುವ ಜಾತಕಗಳ ಸಂಖ್ಯೆಯು ಆ ಬಗೆಗೆ ಯಾವೊಂದು ಖಚಿತ ಅಭಿಪ್ರಾಯವನ್ನಾಗಲೀ ನಿರ್ಧಾರದ ಮಾತನ್ನಾಗಲೀ ಹೇಳಲು ಯುಕ್ತ ವಾದದ್ದಿಲ್ಲ. ಆದಕಾರಣ, ವ್ಯಾಖ್ಯಾನಕಾರರ ಅಭಿಪ್ರಾಯವನ್ನು ನಾನು ಪುರಸ್ಕರಿಸಲಪೇಕ್ಷಿಸುತ್ತೇನೆ—ಯಾವುದನ್ನು "ಪ್ರಾಯೋಗಿಕವಾದ ಸಾಕ್ಷ್ಯ" ಎಂದು ಭಾವಿಸಲು ನಾನು ಅಪೇಕ್ಷಿಸುತ್ತೇನೋ ಅಂಥ ಸಾಕ್ಷ್ಯಾಧಾರದ ಮೇಲೆ ನನ್ನ ಅಭಿಪ್ರಾಯಗಳನ್ನು ಬದಲಾಯಿಸಬೇಕಾಗಿ ಬರುವ ಬಲವಂತ ಪರಿಸ್ಥಿತಿ ಉಂಟಾಗುವತನಕ, ಅದೇ ನನಗೆ ಮಾನ್ಯ. ಸ್ಥಿರದಶೆಯು ಮರಣವನ್ನು ಮುನ್ನುಡಿಯಲು ಮಾತ್ರವಲ್ಲದೆ ಇತರೇ ಘಟನೆಗಳನ್ನು ಮುನ್ನುಡಿಯಲೂ ಉಪಯುಕ್ತ. ತ್ರಿಕೋಣದಶೆಯು ನಮ್ಮ ಸಂಶೋಧನ ವಿಭಾಗದಲ್ಲಿ ಪ್ರಯೋಗಿಸಿ ನೋಡಿರುವ ಪ್ರಕಾರ ಉತ್ತೇಜಕವಾದ ಫಲಿತಾಂಶಗಳನ್ನು ನೀಡಿದೆ. ನಿರ್ಯಾಣ ಶೂಲ ದಶೆಯು ತಂದೆ ತಾಯಿ, ಸೋದರ ಸೋದರಿ ಯರು ಮತ್ತು ಬಂಧುಗಳು ಇವರ ಮರಣವನ್ನು ನುಡಿಯಲು ಉಪಯುಕ್ತ ವೆಂದು ತೋರುತ್ತದೆ. ನಿರ್ಯಾಣ ಫಲ ದಶೆಯು ವ್ಯಕ್ತಿಯ ಸ್ವಂತ ಸಾವನ್ನು ತಿಳಿಯಲು ಪ್ರಧಾನವಾಗಿ ಉದ್ದಿಷ್ಟವಾದರೂ ಬಹುಶಃ ಮಧ್ಯಾಯು ಜಾತಕ ಗಳಿಗೆ ಮಾತ್ರ ಅನ್ವಯವಾಗುತ್ತದೆ. ಆದರೆ ಅದು ಕೇವಲ ಶಾಸ್ತ್ರ ವಿಚಾರಾ ಸಕ್ತಿಯ ಪ್ರಕರಣವೆಂದು ಭಾವಿಸಬಹುದು. ಎಲ್ಲ ವಿವಿಧ ದಶಾವಿಧಾನಗಳೂ ಜತೆ ಜತೆಯಲ್ಲೇ ಬೆಳೆದವೆಂದೂ ಘಟನೆಗಳ ಕಾಲವನ್ನು ತಿಳಿಯಲು ಪ್ರಾಯೋಗಿಕವಾಗಿ ನಡೆಸಿದ ಪ್ರಯತ್ನದ ಬೆಳವಣಿಗೆಯನ್ನು ಸೂಚಿಸುತ್ತವೆ ಎಂದೂ ನನಗೆ ಅನ್ನಿಸುತ್ತದೆ. ನನ್ನ ಕೆಲಸ ಜೈಮಿನಿ ತತ್ವಗಳ ಪ್ರತಿಪಾದನೆ ಯಲ್ಲ. ನನಗೆ ತಿಳಿದಮಟ್ಟಿಗೆ ಅವುಗಳನ್ನು ಯಥಾವತ್ತಾಗಿ ವಿವರಿಸುವುದು. ಆದಕಾರಣ, ಯಾವ ದಶೆಯನ್ನು ಚುನಾಯಿಸಿಕೊಳ್ಳಬೇಕೆಂಬ ತೀರ್ಮಾನ ವನ್ನು ನಾನು ವಾಚಕರ ತಿಳಿವಳಿಕೆಗೆ ಬಿಡುತ್ತೇನೆ. ನಾನು ಹೇಳಬಹು ದಾದುದು ಇಷ್ಟೆ. ಅಭಿಪ್ರಾಯ ಸಂಗ್ರಹದ ಪ್ರಕಾರ, ಮುಖ್ಯ ಘಟನೆಗಳನ್ನು ನುಡಿಯಲು ಚರ ದಶೆ ಸ್ಥಿರ ದಶೆಗಳೆರಡೂ ಪುರಸ್ಕಾರಯೋಗ್ಯವಾದುವು.

ನಿರ್ಯಾಣ ಶೂಲ ದಶೆಯು ತಂದೆ ತಾಯಿಗಳ ಸೋದರ ಸೋದರಿ ಪತ್ನಿ ಮುಂತಾದ ಸಂಬಂಧಿಗಳ ಸಾವನ್ನು ತಿಳಿಯಲು ಪುರಸ್ಕಾರಾರ್ಹ.

## 143. ಫಲಿತಾಂಶದ ಸ್ವರೂಪ

ಪರಾಶರಿ ಪದ್ಧತಿಯಲ್ಲಿರುವಂತೆಯೇ, ದಶಾಭುಕ್ತಿಗಳ ಫಲಿತಾಂಶವನ್ನು ನಿರ್ಣಯಿಸಲು ಹಲವಾರು ಗ್ರಹಸ್ಥಿತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಕಾರಕಾಂಶದಿಂದಲೋ ಆರೂಢ ಲಗ್ನದಿಂದಲೋ ಆಯಾ ಮನೆಗೆ ಸಂಬಂಧ ಪಟ್ಟಂತೆ ಕುರಿತುಕೊಂಡ ರಾಶಿಯು ದಶಾಫಲಗಳನ್ನು ಕೊಡುತ್ತದೆ ಎಂದು ಸಾಧಾರಣವಾಗಿ ಪ್ರತಿಪಾದನೆ ಮಾಡಬಹುದು. ಉಚ್ಚ ಗ್ರಹಗಳಿರುವ ರಾಶಿಗಳು ಅಥವಾ ಗ್ರಹಗಳಿರುವ ಸ್ವಕ್ಷೇತ್ರ ರಾಶಿಗಳು ತಮ್ಮ ದಶಾ ಕಾಲದಲ್ಲಿ ಸಾಧಾರಣವಾಗಿ ಒಳ್ಳೆ ಫಲ ಕೊಡುತ್ತವೆ. ಯಾವ ರಾಶಿಯ ದಶೆಯನ್ನು ಪ್ರಸ್ತಾಪ ಮಾಡುತ್ತೇವೋ ಆ ರಾಶಿಯು ಕಾರಕಾಂಶ, ಆತ್ಮಕಾರಕ ಮುಂತಾದುವುಗಳೊಡನೆ ಪಡೆದಿರುವ ಸಂಬಂಧವಲ್ಲದೆ, ಯಾವೊಂದು ರಾಶಿಯಾಗಲಿ ಶುಭ ಫಲ ಅಶುಭ ಫಲಗಳನ್ನು ಕೊಡಲು ಪಡೆದಿರುವ ಸಾಮರ್ಥ್ಯವೂ ಕೂಡ ಆ ರಾಶಿಯಿಂದ ಗ್ರಹಗಳಿರುವ ಶುಭಾಶುಭ ಪರಿಸ್ಥಿತಿಗಳ ಮೇಲೂ ಬಹುಮಟ್ಟಿಗೆ ಅವಲಂಬನಗೊಂಡಿದೆ. ಹೇಗೆಂದರೆ, ದ್ವಿತೀಯದಲ್ಲಿ ಪಾಪ ಗ್ರಹಗಳಿದ್ದರೆ, ವಿತ್ತನಾಶವುಂಟಾಗುತ್ತದೆ. ಪಂಚಮ ರಾಶಿಯಲ್ಲಿ ಸೂರ್ಯ ಅಥವಾ ಚಂದ್ರ ಶನಿಯು ಜತೆಗೂಡಿದ್ದರೆ ಅಥವಾ ಚಂದ್ರ ರಾಹುಗಳು ಷಷ್ಠಾಷ್ಟಮಗಳಲ್ಲಿದ್ದರೆ, ಜಾತಕನು ಪ್ರಭುತ್ವ ಕೋಪಕ್ಕೆ ಗುರಿಯಾಗುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ, ಷಷ್ಠದಲ್ಲಿ ಸೂರ್ಯನಿದ್ದರೆ ಮೇಲ್ಪಟ್ಟವರ ಕೃಪೆ, ಧನಾಗಮ ಉಂಟಾಗುತ್ತದೆ. ರಾಶಿಯ ಇಕ್ಕೆಲಗಳಲ್ಲೂ ಅಥವಾ ಅಷ್ಟಮದಲ್ಲಿ ಅಥವಾ ಕುರಿತ ರಾಶಿಯಲ್ಲೇ ಪಾಪಿಗಳು ಇದ್ದರೆ, ತೋರಿದರೆ ವಿಪತ್ತು ನಷ್ಟ ಸಾಧಾರಣವಾಗಿ ಪ್ರತಿಕೂಲವಾದ ಕಾಲವು ರಾಶಿದಶೆಯಲ್ಲಿ ಒದಗುತ್ತದೆ. ಕೇಂದ್ರದಲ್ಲಿ ಗುರು ಇರುವುದು ಶ್ಲಾಘ್ಯ. ಮೇಲೆ ಹೇಳಿರುವ ಮತ್ತು ಮುಂದೆ ಹೇಳುವ ಪರಿಸ್ಥಿತಿಗಳಲ್ಲಿ ಜೈಮಿನಿಯನ್ನು ಆಧರಿಸಿರುವ **ವಾಂಛನಾಥೀಯವೇ** ಮುಂತಾದ ಗ್ರಂಥಗಳು ನನಗೆ ಬೇಬಲವಾಗಿವೆ. ಅನೇಕ ಮೂಲಗಳಿಂದ ಸಂಗ್ರಹಿಸಿರುವ ದಶಾ ನಿರ್ಣಯದ ವಿಧಿಗಳನ್ನು ಮುಂದೆ ಸೂಚಿಸಿರುವಂತೆ ಗಮನಿಸಬಹುದು : (1) ತೃತೀಯದಲ್ಲಿ ಚಂದ್ರ ಶುಕ್ರರಿದ್ದರೆ, ರಾಶಿದಶೆಯು ಸಂಪತ್ತನ್ನು ಕೊಡುತ್ತದೆ ; (2) ಈ ಗ್ರಹಗಳು ದ್ವಾದಶದಲ್ಲಿದ್ದರೆ ಸಂಪತ್ತು

ನಷ್ಟವಾಗುತ್ತದೆ ; (3) ದ್ವಾದಶ ರಾಹು—ಜ್ವರವೇ ಮುಂತಾದ ದೇಹ ಬಾಧೆಗಳು; (4) ಕುರಿತ ರಾಶಿಯಲ್ಲಿ ರಾಹುವಿದ್ದರೆ ವಿದೇಶ ಯಾತ್ರೆ ; (5) ನವಮದಲ್ಲಿ ಪಾಪಿಗಳು—ತಂದೆಗೆ ಅಪಾಯ. ದಶರಾಶಿಯನ್ನು ಲಗ್ನ ವಾಗಿ ಭಾವಿಸಿ, ಅಲ್ಲಿಂದ ಯಥೋಚಿತವಾದ ರಾಶಿಗಳನ್ನು ಗಣನೆಗೆ ತೆಗೆದು ಕೊಳ್ಳುವ ಮೂಲಕ ಶುಭಾಶುಭ ಫಲಗಳನ್ನು ಹೇಳಬಹುದು. ಹೇಗೆಂದರೆ, ಚತುರ್ಥದಲ್ಲಿ ಪಾಪಿಗಳಿದ್ದಾಗ, ತಾಯಿಯ ಆರೋಗ್ಯಕ್ಕೆ ಅಪಾಯವನ್ನು ನಾವು ಊಹಿಸಬೇಕಾಗುತ್ತದೆ.

ವಿವಿಧ ರಾಶಿಗಳ ದಶೆಗಳ ಪೈಕಿ, ತುಲಾ, ಕಟಕ, ವೃಷಭ, ಮೀನ, ಧನುಸ್, ಕನ್ಯಾ, ಮಿಥುನ ಈ ರಾಶಿ ದಶೆಗಳು ಅನುಕೂಲವಾದ ಫಲಗಳನ್ನು ಕೊಡುತ್ತವೆಂದು ಹೇಳುತ್ತಾರೆ—ಅಂದರೆ ತುಲಾದಿಂದ ಮಿಥುನದವರೆಗೆ ಫಲಗಳು ತಮ್ಮ ಶುಭ ಸ್ವರೂಪವನ್ನು ಅನುಕ್ರಮವಾಗಿ ಕಳೆದುಕೊಳ್ಳುತ್ತ ಹೋಗುತ್ತವೆ. ಸಿಂಹ, ಮೇಷ, ಕುಂಭ, ವೃಶ್ಚಿಕ, ಮಕರಗಳು ಸಾಧಾರಣವಾಗಿ ಕೆಟ್ಟ ಫಲಗಳನ್ನು ಕೊಡುತ್ತವೆ—ಅಂದರೆ ಫಲಗಳ ಕೆಟ್ಟ ಸ್ವರೂಪವು ಅನು ಕ್ರಮವಾಗಿ ಹೆಚ್ಚುತ್ತಾ ಹೋಗುತ್ತದೆ. ಒಟ್ಟಿನಲ್ಲಿ ಒಂದು ರಾಶಿದಶೆಯ ಫಲ ಗಳ ಸ್ವರೂಪವನ್ನೂ, ಆ ರಾಶಿಯ ಮತ್ತು ಅದರ ಅಧಿಪತಿಯ ಬಲಾಬಲ ಗಳನ್ನೂ ಅರಿಷ್ಟಗಳನ್ನೂ ಗಣನೆಗೆ ತೆಗೆದುಕೊಂಡು ನಿಷ್ಕರ್ಷಿಸಬೇಕು.

ಮೇಲೆ ಅಂಕ 142ರಲ್ಲಿ ಪ್ರಸ್ತಾಪ ಮಾಡಿರುವಂತೆ, ಮೊದಲನೆಯ ಅಧ್ಯಾಯ ಎರಡನೇ ಪಾದದ ಕಡೆಯ ಸೂತ್ರದಲ್ಲಿ ಜೈಮಿನಿ ಕೊಟ್ಟಿರುವ ಮೇರೆಗೆ ಗ್ರಹಗಳ ಯಾವೊಂದು ವಿಶಿಷ್ಟ ಪರಿಸ್ಥಿತಿಗೆ ಸಂಬಂಧಪಟ್ಟ ಹಾಗೆ ಫಲ ಗಳು ಸಲ್ಲುತ್ತವೆಯೋ ಆ ಫಲಗಳು ಆ ಪರಿಸ್ಥಿತಿಗೆ ಸೇರಿದ ರಾಶಿಗಳ ದಶಾ ಭುಕ್ತಿ ಗಳ ಅವಧಿಯಲ್ಲಿ ಅನುಭವಕ್ಕೆ ಬರುತ್ತವೆ. ಉದಾಹರಣೆಗೆ, ಮೊದಲನೆಯ ಅಧ್ಯಾಯದ ಎರಡನೆಯ ಪಾದದ 42ನೆಯ ಶ್ಲೋಕವನ್ನು ತೆಗೆದುಕೊಳ್ಳಿ. ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರ ಶುಕ್ರರಿದ್ದರೆ ಅರಮನೆಯಂಥ ಕಟ್ಟಡ ಗಳನ್ನು ಕೊಡುತ್ತಾರೆ. ಕಾರಕಾಂಶವು ಮೇಷ ಅನ್ನಿ. ಆಗ್ಗೆ ಈ ಪ್ರಮೇಯವು ಚತುರ್ಥವಾದ ಕರ್ಕಾಟಕಕ್ಕೆ ಅನ್ವಯವಾಗುತ್ತದೆ. ಕರ್ಕಾಟಕ ದಶೆಯಲ್ಲಿ ವ್ಯಕ್ತಿಯು ಮನೆಗಳೇ ಮುಂತಾದ ಆಸ್ತಿ ಮಾಡಿಕೊಳ್ಳುತ್ತಾನೆ—ಅಂದರೆ ಕರ್ಕಾಟಕಕ್ಕೆ ಮೇಲೆ ಸೂಚಿಸಿರುವಂಥ ಯಾವ ಬಾಧೆಯೂ ಪೀಡೆಯೂ ಇರಬಾರದು.

## 144. ತಂದೆಯ ಸಾವು

(1) ಸೂರ್ಯ ಶುಕ್ರರಲ್ಲಿ ಯಾರು ಪ್ರಬಲನೋ ಅವನನ್ನು ಪಿತೃಕಾರಕ ಎಂದು ಭಾವಿಸಬೇಕು. ಸೂರ್ಯ ಶುಕ್ರರ ಪೈಕಿ ಯಾರು ದುರ್ಬಲನೋ ಅವನು ಪಾಪದೃಷ್ಟಿಗೊಳಗಾದಾಗ ಪಿತೃಮಾರಕನಾಗುತ್ತಾನೆ. ತಂದೆಯ ಸಾವು (ಅ) ಪಿತೃಮಾರಕ ರಾಶಿಯಿಂದ ಅರ್ಥಾತ್ ಪಿತೃಮಾರಕನಿಂದ ಅಷ್ಟಮದ ಅಧಿಪತಿಯು ಇರುವ ಶೂಲ ರಾಶಿ (ಪ್ರಥಮ ಪಂಚಮ ನವಮ) ಗಳ* ದಶೆಯಲ್ಲಿ ಉಂಟಾಗುತ್ತದೆ. ಉದಾಹರಣೆಗೆ ಪಿತೃಮಾರಕ ಶುಕ್ರ : ಕನ್ಯೆಯಲ್ಲಿ ಅವನ ಸ್ಪಷ್ಟ 20°. ಪಿತೃಮಾರಕನಿಂದ ಅಷ್ಟಮದ ಅಧಿಪತಿ ಕುಜ; ಅವನ ಸ್ಪಷ್ಟ ವೃಷಭ 24°. ಆಗ್ಗೆ ಕುಜನೇ ಹೆಚ್ಚು ಪ್ರಬಲ. ತಂದೆಯ ಸಾವು ಕುಜನಿರುವ ರಾಶಿಯಾದ ವೃಷಭದಿಂದ ಪ್ರಥಮ ಪಂಚಮ ನವಮ ರಾಶಿಗಳೊಂದರ ದಶೆಯಲ್ಲಿ ಸಂಭವಿಸುತ್ತದೆ. (ಇ) ಲಗ್ನದಿಂದ ನವಮವನ್ನೂ ಸಪ್ತಮದಿಂದ ನವಮವನ್ನೂ ತೆಗೆದುಕೊಳ್ಳಿ. ಯಾವುದು ಹೆಚ್ಚು ಪ್ರಬಲ ನೋಡಿ. ಹೆಚ್ಚು ಪ್ರಬಲ ರಾಶಿಯ ನಿರ್ಯಾಣ ಶೂಲ ದಶೆಯಲ್ಲಿ ತಂದೆಯ ಸಾವುಂಟಾಗುತ್ತದೆ. ಉದಾಹರಣೆಗೆ, ಲಗ್ನದಿಂದ ನವಮವೂ ಸಪ್ತಮದಿಂದ ನವಮವೂ ಕ್ರಮವಾಗಿ ಕುಂಭ ಸಿಂಹಗಳೆನ್ನಿ ; ಅವುಗಳ ಪೈಕಿ ಸಿಂಹವೇ ಹೆಚ್ಚು ಪ್ರಬಲವಾದರೆ, ಆಗ್ಗೆ ತಂದೆಯ ಸಾವು ಸಿಂಹ (ಪ್ರಥಮ)ದ, ಧನುಸ್ಸಿ (ಪಂಚಮ) ನ; ಅಥವಾ ಮೇಷ (ನವಮ)ದ ಶೂಲ ದಶೆಗಳಲ್ಲಿ ಉಂಟಾಗು ತ್ತದೆಂದು ನುಡಿಯಬಹುದು. ಮೇಲೆ ಹೇಳಿರುವ ಎರಡು ವಿಧಾನಗಳ ಪೈಕಿ, ಕಡೆಯದೇ ಹೆಚ್ಚು ವಿಶ್ವಸನೀಯ ಎಂದೂ, ಸಾವಿನ ಸೂಚನೆಗೆ ಅದೇ ಎತ್ತಿದ ಕೈ ಎಂದೂ ಸಾಮಾನ್ಯ ಭಾವನೆ.

ನಲವತ್ತೆರಡನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ತಂದೆಯ ಮಾರಕ ಕಾಲವನ್ನು ಕಂಡುಹಿಡಿಯಿರಿ.**

(1) ಪಿತೃಮಾರಕನು ಸೂರ್ಯ ಮತ್ತು ಶುಕ್ರ.

∵ ಶುಕ್ರನದೇ ಹೆಚ್ಚು ಸ್ಪಷ್ಟವಾದ ಕಾರಣ, ಅವನು ಸೂರ್ಯನಿಗಿಂತ ಹೆಚ್ಚು ಪ್ರಬಲ. ಅವನು ಪಿತೃಮಾರಕನಾಗಬಲ್ಲ.

*ನಿರ್ಯಾಣ ಶೂಲ ದಶೆಗಳ ಅನ್ವಯಕ್ಕಾಗಿ ರಾಶಿಗಳ ಬಲಾಬಲಗಳನ್ನು ತಿಳಿಯು ವುದಕ್ಕೆ, ಕೆಲವರ ಪ್ರಕಾರ, ಗ್ರಹಗಳಿರುವ ರಾಶಿಯೂ ಆ ರಾಶಿಗಳ ಅಧಿಪತಿಯ ಸ್ಪಷ್ಟಗಳೂ ಆಧಾರ.

ಸೂರ್ಯನು ಪಾಪಿಯ ದೃಷ್ಟಿಗೆ ಒಳಗಾಗಿದ್ದಾನೆ.

∴ ಸೂರ್ಯನು ಪಿತೃಮಾರಕನಾಗಬಲ್ಲ.

ಆದರೆ ಶುಕ್ರನು ಪಾಪಿ ಶನಿಯ ದೃಷ್ಟಿಗೆ ಒಳಗಾಗಿರುವ ಕಾರಣ, ಇಬ್ಬರ ಪೈಕಿ ಪ್ರಬಲನಾದ ಶುಕ್ರನು ಪಿತೃಮಾರಕನಾಗುತ್ತಾನೆ. ಶುಕ್ರನಿಂದ ಅಷ್ಟಮಾಧಿಪತಿ ಚಂದ್ರ, ಚಂದ್ರ ಶುಕ್ರರ ಪೈಕಿ ಶುಕ್ರನದೇ ಹೆಚ್ಚಿನ ಸ್ಪಷ್ಟ ವಾದ ಕಾರಣ ಅವನೇ ಹೆಚ್ಚು ಪ್ರಬಲ. ತಂದೆಯ ಸಾವು ಧನುಸ್ (ಪ್ರಥಮ) ಮೇಷ (ಪಂಚಮ) ಮತ್ತು ಸಿಂಹ (ನವಮ) ದಶೆಗಳಲ್ಲಿ ಒದಗಬಹುದು.

ಸಿಂಹದಶೆಯ ಕಡೆಯಲ್ಲಿ ಜಾತಕನಿಗೆ 36 ವರ್ಷಗಳು. ತಂದೆಯು ವಾಸ್ತವವಾಗಿ 37ನೆಯ ವಯಸ್ಸಿನಲ್ಲಿ ಸತ್ತನು.

(2) ಲಗ್ನದಿಂದ ನವಮ ಮತ್ತು ಸಪ್ತಮದಿಂದ ನವಮ ಕ್ರಮವಾಗಿ ಮಕರ ಮತ್ತು ಕಟಕ. ಕಡೆಯದೇ ಹೆಚ್ಚು ಪ್ರಬಲ (ಉದಾಹರಣೆ 18 ನೋಡಿ.)

∴ ತಂದೆಯ ಸಾವು ಕರ್ಕಾಟಕದಲ್ಲೋ ವೃಶ್ಚಿಕದಲ್ಲೋ ಮೀನ ದಲ್ಲೋ ಉಂಟಾಗಬಹುದು, ಮೀನ ದಶೆಯು ಉತ್ತರ ವಯಸ್ಸಿನಲ್ಲಿ ಬರುವ ಕಾರಣ, ಅದು ಸಲ್ಲುವುದಿಲ್ಲ. ವೃಶ್ಚಿಕ ಕರ್ಕಾಟಕಗಳ ಪೈಕಿ ಕಡೆಯದೇ ಪ್ರಬಲ, ಅದರ ಅಧಿಪತಿಯದೇ ಹೆಚ್ಚಿನ ಸ್ಪಷ್ಟ. ಕರ್ಕಾಟಕದ ಶೂಲದಶೆಯು 36ನೆಯ ಅಥವಾ 45ನೆಯ ವಯಸ್ಸಿನಿಂದ ಒಂಬತ್ತು ವರ್ಷ ನಡೆಯು ತ್ತದೆ. ಕರ್ಕಾಟಕ ದಶೆಯು ಪ್ರಾರಂಭವಾಗುತ್ತಲೇ ತಂದೆಯು ಸಾವುಂಟಾಯಿತು.

## 145. ತಾಯಿಯ ಸಾವು

(1) ಕುಜ ಚಂದ್ರರ ಪೈಕಿ ಹೆಚ್ಚು ಪ್ರಬಲ ಮಾತೃಕಾರಕ. ಈ ಇಬ್ಬರ ಪೈಕಿ ದುರ್ಬಲನಿಗೆ ಪಾಪದೃಷ್ಟಿಯುಂಟಾದರೆ, ಅವನೇ ಮಾತೃಕಾರಕ (ಅ). (ಅ)ದಿಂದ ಶೂಲರಾಶಿ (ಪ್ರಥಮ ಪಂಚಮ ನವಮ)ಗಳ (ಚರ) ದಶೆ ಯಲ್ಲಿ ಮಾತೃಕಾರಕ ರಾಶಿಯ ಅಷ್ಟಮ ರಾಶಿದಶೆಯಲ್ಲಿ ಅಥವಾ (ಇ) ಮಾತೃಕಾರಕ ರಾಶಿಯಿಂದ ಅಷ್ಟಮಾಧಿಪತಿಯಿರುವ ರಾಶಿಯಿಂದ ಶೂಲದಶಾ ರಾಶಿಗಳ ಚರದಶೆಯಲ್ಲಿ ತಾಯಿಯ ಸಾವುಂಟಾಗುತ್ತದೆ.

(2) ಲಗ್ನದಿಂದ ಚತುರ್ಥವೂ ಸಪ್ತಮದಿಂದ ಚತುರ್ಥವೂ ಆದ ರಾಶಿ ಗಳ ಪೈಕಿ ಪ್ರಬಲವಾದುದನ್ನು ಗೊತ್ತುಹಚ್ಚಿ. ಆ ಪ್ರಬಲ ರಾಶಿಯಿಂದ

ಪ್ರಥಮವೋ ಪಂಚಮವೋ ನವಮವೋ ಆದ ರಾಶಿಯ ನಿರ್ಯಾಣಶೂಲ ದಶೆಯಲ್ಲಿ ತಾಯಿಯು ಸಾವನ್ನು ನುಡಿಯಬಹುದು.

ನಲವತ್ತಮೂರನೆಯ ಉದಾಹರಣೆ : **ಮೂದರಿ ಜಾತಕದಲ್ಲಿ ತಾಯಿಯು ಸಾವಿನ ಕಾಲವನ್ನು ಕಂಡುಹಿಡಿಯಿರಿ.**

(1) ಚಂದ್ರ ಕುಜರು ಮಾತೃಕಾರಕರು. ಚಂದ್ರ (18° 29′) ಕುಜ (0° 53′)ನಿಗಿಂತ ಹೆಚ್ಚು ಪ್ರಬಲ. ಚಂದ್ರ ಕುಜರಿಬ್ಬರೂ ಸೂರ್ಯನ ಪಾಪ ದೃಷ್ಟಿಗೆ ಈಡಾಗಿದ್ದಾರೆ. ಆದಕಾರಣ ಹೆಚ್ಚು ಪ್ರಬಲ ಗ್ರಹವಾದ ಚಂದ್ರ ನೊಬ್ಬನೇ ಮಾತೃಕಾರಕ.

ಮಾತೃಕಾರಕನಿಂದ ಅಷ್ಟಮಾಧಿಪತಿ ಕುಜ.

ಆದಕಾರಣ ಚಂದ್ರನೇ ಸರಿ.

∴ ತಾಯಿಯ ಸಾವು ಮೇಷದ ಶೂಲ ರಾಶಿಗಳಾದ ಮೇಷ, ಧನುಸ್, ಸಿಂಹಗಳಲ್ಲಿ ಸಂಭವಿಸಬಹುದು. ಈ ಮೂರರ ಪೈಕಿ ಮೇಷವೇ ಅತಿ ಪ್ರಬಲ; ಅದರಲ್ಲಿ ಎರಡು ಗ್ರಹಗಳಿವೆ.

ಮೇಷ ದಶೆಯು 13ನೆಯ ವಯಸ್ಸಿನವರೆಗೆ ನಡೆಯಿತು. ಆ ಅವಧಿ ಯಲ್ಲಿ ತಾಯಿ ಸತ್ತರು.

(2) ಲಗ್ನದಿಂದಲೂ ಸಪ್ತಮದಿಂದಲೂ ಚತುರ್ಥ ರಾಶಿಗಳು ಕ್ರಮ ವಾಗಿ ಸಿಂಹ ಕುಂಭ. ಸಿಂಹಕ್ಕಿಂತ ಕುಂಭ ಪ್ರಬಲ. ಅದರಲ್ಲಿ ಗ್ರಹಗಳಿವೆ. ಆದಕಾರಣ ತಾಯಿಯ ಸಾವು ಕುಂಭ ಮಿಥುನ ಅಥವಾ ತುಲಾ ಶೂಲದಶೆ ಯಲ್ಲಿ ಸಂಭವ. ಈ ಪೈಕಿ ಕುಂಭವು ತ್ಯಾಜ್ಯ; ಜಾತಕನಿಗೆ 80 ವರ್ಷ ವಯಸ್ಸಾದಾಗ ಅದು ನಡೆಯುತ್ತದೆ. ತುಲಾ, ಮಿಥುನಗಳ ಪೈಕಿ, ತುಲವೇ ಪ್ರಬಲ; ಅದರಲ್ಲಿ ಎರಡು ಗ್ರಹಗಳಿವೆ. ತುಲಾ ರಾಶಿಯ ಶೂಲದಶೆ ಒಂಬತ್ತ ರಿಂದ ಹದಿನೈದರವರೆಗೆ ನಡೆಯುತ್ತದೆ. ಆ ಅವಧಿಯಲ್ಲಿ ಜಾತಕನಿಗೆ ಮಾತೃ ವಿಯೋಗವುಂಟಾಯಿತು. ವಾಸ್ತವವಾಗಿ, ಆಗ ಮಿಥುನಭುಕ್ತಿ.

## 146. ಜಾತಕನ ಸಾವು

ಬೇರೆ ಕಡೆ ಮಾರಕ ರಾಶಿಗಳನ್ನು ಗೊತ್ತುಪಡಿಸುವ ಕ್ರಮವನ್ನು ವಿಶದ ವಾಗಿ ಕೊಟ್ಟಿದೆ. ಈ ವಿಭಾಗದಲ್ಲಿ ಸ್ವಯಂ ಜಾತಕನ ಸಾವು ಶೂಲದಶೆಯಲ್ಲಿ ಒದಗುವುದನ್ನು ನುಡಿಯುವ ವಿಧಾನ ಕುರಿತು ಪ್ರಸ್ತಾಪ ಮಾಡುತ್ತೇನೆ. ಲಗ್ನ ಸಪ್ತಮ ಇವೆರಡರಲ್ಲಿ ಪ್ರಬಲವಾದುದನ್ನು ಕಂಡುಹಿಡಿಯಿರಿ. ಈ ಪ್ರಬಲ

ರಾಶಿಯ ಶೂಲದಶೆಯಲ್ಲಿ ಅಥವಾ ಅದರಿಂದ ಪಂಚಮ ನವಮ ರಾಶಿ ಗಳೊಂದರಲ್ಲಿ ಸಾವುಂಟಾಗುತ್ತದೆ.

ನಲವತ್ತನಾಲ್ಕನೆಯ ಉದಾಹರಣೆ : **ಜಾತಕನ ಸಾವನ್ನು ಅಂಕ 146ರ ಪ್ರಕಾರ ಕಂಡುಹಿಡಿಯಿರಿ.**

ಲಗ್ನ ಸಪ್ತಮಗಳ ಪೈಕಿ ಲಗ್ನವೇ ಪ್ರಬಲ (ಉದಾಹರಣೆ 18 ನೋಡಿ). ಆದುದರಿಂದ ಸಾವು ವೃಷಭ ಕನ್ಯಾ ಅಥವಾ ಮಕರ ರಾಶಿಯ ಶೂಲದಶೆಯಲ್ಲಿ ಉಂಟಾಗಬಹುದು. ಜಾತಕವು ಪೂರ್ಣಾಯುವಿನದಾದ ಕಾರಣ, ಮಕರವು ಮಾರಕ ರಾಶಿ. ಮಕರದ ಶೂಲದಶೆ 90ರಿಂದ 99 ವರ್ಷದ ತನಕ ನಡೆಯು ತ್ತದೆ. ಜಾತಕರು 81 ವರ್ಷ ತುಂಬಿದ ತರುವಾಯ ನಿಧನರಾದರು.

## 147. ಹೆಂಡತಿಯ ಸಾವು

ಇದು ಗುರುವಿರುವ ರಾಶಿಯ ಮತ್ತು ಅದರ ಪಂಚಮ ನವಮ ರಾಶಿ ಗಳ (ಚರ) ದಶೆಗಳಲ್ಲಿ ಉಂಟಾಗಬಹುದು. ಸಾವಿನ ಸಂಭವ ಕಾಲವನ್ನು ಕಂಡು ಹಿಡಿಯುವಾಗ ಸಂಬಂಧಪಟ್ಟ ಭಾವದ ಸಾಧಾರಣ ಬಲಕ್ಕೆ ಯುಕ್ತವಾದಷ್ಟು ಗಮನವನ್ನು ಕೊಡಬೇಕು.

ನಲವತ್ತೈದನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಹೆಂಡತಿಯ ಸಾವಿನ ಕಾಲವನ್ನು ಕಂಡುಹಿಡಿಯಿರಿ.**

ಗುರು ಕುಂಭದಲ್ಲಿದ್ದಾನೆ. ಸಾವು ಕುಂಭ ಮಿಥುನ ತುಲಾ ರಾಶಿಗಳ ದಶೆಯಲ್ಲಿ ಒದಗಬಹುದು. ಕುಂಭದಶೆಯು ಜಾತಕನಿಗೆ 24 ವಯಸ್ಸಾದಾಗ ಮುಗಿಯುತ್ತದೆ. ಸಪ್ತಮ ಭಾವವು ಪ್ರಬಲವಾಗಿದೆ. ಆದಕಾರಣ ಹೆಂಡತಿಯ ಸಾವು ತುಲಾ ಮಿಥುನಗಳ ಪೈಕಿ ಪ್ರಬಲವಾದ ತುಲಾದಶೆಯಲ್ಲಿ ಉಂಟಾಗ ಬಹುದು. ತುಲಾದಶೆಯು ಜಾತಕನಿಗೆ 46 ವರ್ಷ ತುಂಬುವ ತನಕ ನಡೆಯು ತ್ತದೆ. ಸಾವು 36ನೆಯ ವಯಸ್ಸು ಮುಗಿಯುವಾಗ ಉಂಟಾಯಿತು.

## 148. ಸಂಬಂಧಿಗಳ ಸಾವು

(1) ಪುತ್ರ ಮಾತುಲ ಮತ್ತಿತರ ಬಂಧುಗಳ ಕಾರಕರ ಸನ್ನಿವೇಶವನ್ನು ಗಮನಕ್ಕೆ ತೆಗೆದುಕೊಂಡು, ಆಯಾ ಸಂಬಂಧಿಗಳ ಸಾವನ್ನು ಆಯಾ ಶೂಲ ರಾಶಿಗಳ (ಚರ) ದಶೆಯಲ್ಲಿ ನುಡಿಯಬಹುದು.

(2) ಲಗ್ನದಿಂದ ತೃತೀಯ ಮತ್ತು ಸಪ್ತಮದಿಂದ ತೃತೀಯ ರಾಶಿ ಗಳಲ್ಲಿ ಪ್ರಬಲವಾದುದನ್ನು ತೆಗೆದುಕೊಂಡು ಯಥೋಚಿತವಾದ ನಿರ್ಯಾಣ

ಶೂಲ ದಶೆಯಲ್ಲಿ ಸೋದರ ಸಾವನ್ನು ನುಡಿಯತಕ್ಕುದು. ಮಕ್ಕಳ ಸಾವು, ಲಗ್ನದಿಂದ ಪ್ರಥಮ ಪಂಚಮ ನವಮವಾದ ರಾಶಿಗಳಿಗೂ ಸಪ್ತಮದಿಂದ ಪಂಚಮವಾದ ರಾಶಿಗೂ ನಡುವೆ ಪ್ರಬಲತರವಾದ ರಾಶಿಯಿಂದ ಪ್ರಥಮ ಪಂಚಮ ನವಮ ರಾಶಿಗಳ ನಿರ್ಯಾಣ ಶೂಲದಶೆಯಲ್ಲಿ ಉಂಟಾಗಬಹುದು.

ಅಣ್ಣನ ಸಾವನ್ನು ಲಗ್ನದಿಂದ ಏಕಾದಶ ರಾಶಿ ಮತ್ತು ಸಪ್ತಮದಿಂದ ಏಕಾದಶ ರಾಶಿ ಈ ಪೈಕಿ ಪ್ರಬಲವಾದ ರಾಶಿಯಿಂದ ಪ್ರಥಮ ಪಂಚಮ ನವಮ ರಾಶಿಗಳ ಶೂಲದಶೆಗಳಲ್ಲಿ ನಿರೀಕ್ಷಿಸಬಹುದು.

ಈ ಎಲ್ಲ ಘಟನೆಗಳನ್ನೂ ಮುನ್ನುಡಿಯುವಾಗ ಜನ್ಮಕುಂಡಲಿಯನ್ನು ಜಾಗರೂಕತೆಯಿಂದ ಪರಿಶೀಲಿಸಿ ಸೂಚನೆಗಳನ್ನು ಮೊದಲು ಕಂಡುಕೊಳ್ಳಬೇಕು. ಉದಾಹರಣೆಗೆ, ಜನ್ಮಕುಂಡಲಿಯಲ್ಲಿ ಸಂತಾನ ಸೂಚನೆಗಳು ಇಲ್ಲವಾದರೆ, ಮಕ್ಕಳ ಸಾವಿಗೆ ಕಾಲನಿರ್ಣಯದ ಪ್ರಶ್ನೆಯೇ ಏಳುವುದಿಲ್ಲ.

ಸಲಹತ್ಕಾರನೆಯ ಉದಾಹರಣೆ : **ಮಾದರಿ ಜಾತಕದಲ್ಲಿ ಸೋದರರ ಮತ್ತು ಮಕ್ಕಳ ಸಾವಿನ ಕಾಲಗಳನ್ನು ಗೊತ್ತುಹಚ್ಚಿ.**

**ತಮ್ಮಂದಿರು**

ಲಗ್ನದಿಂದಲೂ ಸಪ್ತಮದಿಂದಲೂ ತೃತೀಯ ರಾಶಿಗಳು ಕ್ರಮವಾಗಿ ಕರ್ಕಾಟಕ ಮತ್ತು ಮಕರ. ಮಕರವು ಪ್ರಬಲತರ. ತಮ್ಮಂದಿರ (ಯಾರಾದರೂ ಇದ್ದರೆ) ಸಾವು ಕರ್ಕಾಟಕ ವೃಶ್ಚಿಕ ಮೀನ ರಾಶಿಗಳ ಶೂಲದಶೆಯಲ್ಲಿ ಸಂಭವಿಸಬಹುದು.

**ಅಣ್ಣಂದಿರು, ಮಕ್ಕಳು**

ಲಗ್ನದಿಂದ ಮತ್ತು ಸಪ್ತಮದಿಂದ ಪಂಚಮ ರಾಶಿಗಳು ಕ್ರಮವಾಗಿ ಕನ್ಯಾ ಮತ್ತು ಮೀನ. ಕಡೆಯದೇ ಅತಿ ಪ್ರಬಲ. ಆದಕಾರಣ ಮಕ್ಕಳ ಸಾವು ಮೀನ ಕಟಕ ವೃಶ್ಚಿಕಗಳ ಶೂಲದಶೆಯಲ್ಲಿ ಸಂಭವಿಸಬಹುದು.

# ಸಾರಾಂಶ

## 149. ಸಾಮಾನ್ಯ ಪರಿಶೀಲನೆಗಳು

ಜೈಮಿನಿ ಪರಾಶರಿ ಜ್ಯೋತಿಷ ವಿಧಾನಗಳು ಬೇರೆ ಬೇರೆಯಾಗಿ ಕಂಡು ಬಂದರೂ, ವಾಸ್ತವವಾಗಿ ಜೈಮಿನಿಯು ಪರಾಶರಿಯ ಕವಲು. ಜೈಮಿನಿಯು ಅದನ್ನು ತನ್ನ ಪ್ರತಿಭೆಯ ನೇರಕ್ಕೆ ಬೆಳೆಯಿಸಿ, ವ್ಯಾಖ್ಯಾನಗಳ ಸಹಾಯವಿಲ್ಲ ವಾದರೆ ಅರ್ಥವಾಗದಂಥ ಸೂತ್ರಗಳ ರೂಪದಲ್ಲಿ ಮಂಡಿಸಿದ್ದಾನೆ. ಜೈಮಿನಿಯ ವೈಶಿಷ್ಟ್ಯಗಳೆಂದರೆ : ಕಾರಕಾಂಶ ಆರೂಢ ಲಗ್ನಗಳಿಗೆ ಪ್ರಾಮುಖ್ಯ. ಆಯು ರ್ದಾಯ ಗ್ರಹಗಳ ಬಲಾಬಲಗಳು ಇವುಗಳ ನಿರ್ಣಯ ಮಾಡಲು ಬಳಸುವ ವಿಧಾನಗಳು ಮತ್ತು ದಶೆಗಳ ಸಮಸ್ಯೆ ಕುರಿತಂಥ ಮೂಲರೂಪದ ವಿಶಿಷ್ಟ ಪರಿಹಾರೋಪಾಯ. ಕುರಿತುಕೊಂಡ ಘಟನೆಯನ್ನು ನುಡಿಯಲು ಯಥೋ ಚಿತವಾದ ದಶೆಯ ಆಯ್ಕೆ ಮಾಡುವ ವಿಷಯ ವಿವಾದಾಸ್ಪದವಾಗಿದೆ. ಆಯಾ ಕುಂಡಲಿಗೆ ತಕ್ಕಂತೆ ಒಪ್ಪುವ ದಶಾ ವಿಧಾನವನ್ನು ವಾಚಕರೇ ತಮ್ಮ ತಿಳಿವಿಗೆ ಅನುಸಾರವಾಗಿ ಕಂಡುಹಿಡಿದುಕೊಳ್ಳತಕ್ಕದು. ಚರದಶೆಗೆ ಪ್ರಾಶಸ್ತ್ಯವನ್ನು ಕೊಟ್ಟಿರುವುದಂತೂ ನಿಸ್ಸಂಶಯ.

## 150. ಕಾರಕರು ಅಥವಾ ಕಾರಕ ಗ್ರಹಗಳು

ಜೈಮಿನಿ ಪ್ರಕಾರ, ಪ್ರತಿ ಕುಂಡಲಿಗೂ ತಕ್ಕಂತೆ ಕಾರಕರು ವ್ಯತ್ಯಾಸ ವಾಗುತ್ತಾರೆ. ಪ್ರಧಾನ ಕಾರಕರು ಏಳು: ಆತ್ಮ, ಅಮಾತ್ಯ, ಭ್ರಾತೃ, ಮಾತೃ, ಪುತ್ರ, ಜ್ಞಾತಿ ಮತ್ತು ದಾರ. ಗ್ರಹಗಳ ಸ್ಥಿತಿಗಳನ್ನು ರಾಶಿಗಳಾಗಿ ಡಿಗ್ರಿಗಳಾಗಿ ಪರಿವರ್ತಿಸಿ. ರಾಶಿಗಳನ್ನು ತ್ಯಜಿಸಿ, ಡಿಗ್ರಿಗಳನ್ನು ತೆಗೆದುಕೊಂಡು ಗ್ರಹಗಳ ಸ್ಥಾನಗಳನ್ನು ಇಳಿಮುಖವಾಗಿ ಪಟ್ಟಿಮಾಡಿ. ಹೆಚ್ಚು ಡಿಗ್ರಿಗಳನ್ನುಳ್ಳ ಗ್ರಹ

ಆತ್ಮಕಾರಕ. ಕಾರಕಗಳ ಕ್ರಮವನ್ನು ಮೇಲೆ ಕೊಟ್ಟಿರುವಂತೆ ಇತರ ಗ್ರಹಗಳು ಅಮಾತ್ಯ, ಭ್ರಾತೃ ಇತ್ಯಾದಿ ಕಾರಕಗಳಾಗುತ್ತವೆ. ಎರಡು ಅಥವಾ ಮೂರು ಗ್ರಹಗಳು ಒಂದೇ ಸ್ಪಷ್ಟವನ್ನು ಪಡೆದಿದ್ದರೆ ಕಾರಕರು ವಿಲೀನವಾಗುತ್ತಾರೆ. ಖಾಲಿಯಾದ ಕಾರಕರನ್ನು ರಾಹುವೋ ಮತ್ತು ಯಥೋಚಿತವಾದ ನೈಸರ್ಗಿಕ ಕಾರಕರೋ ತುಂಬುತ್ತಾರೆ.

ನಲವತ್ತೇಳನೆಯ ಉದಾಹರಣೆ: **ಹಿಟ್ಲರನ ಜಾತಕದಲ್ಲಿ—ಜನನ 24–4–1889 ಸಂಜೆ 6–30 (ಸ್ಥಳೀಯ ಸರಾಸರಿ ಕಾಲ) ಅಂದರೆ 33–30 ಘಳಿಗೆ. ಅಕ್ಷಾಂತ 48° ಉತ್ತರ, ರೇಖಾಂಶ 13° ಪೂರ್ವ—ವಿವಿಧ ಕಾರಕಗಳನ್ನು ಕಂಡುಹಿಡಿಯಿರಿ.**

ಕುಂಡಲಿಯಲ್ಲಿರುವ ಗ್ರಹಗಳ ಸನ್ನಿವೇಶ :

| ಗ್ರಹ | ರಾಶಿ | ಡಿಗ್ರಿ | ನಿಮಿಷ |
|---|---|---|---|
| ಸೂರ್ಯ | ಮೇಷ | 9 | 56 |
| ಚಂದ್ರ | ಧನುಸ್ | 15 | 46 |
| ಕುಜ | ಮೇಷ | 25 | 31 |
| ಬುಧ | ಮೇಷ | 4 | 48 |
| ಗುರು | ಧನುಸ್ | 17 | 23 |
| ಶುಕ್ರ | ಮೇಷ | 25 | 50 |
| ಶನಿ | ಕಟಕ | 22 | 35 |
| ರಾಹು | ಮಿಥುನ | 25 | 6 |
| ಕೇತು | ಧನುಸ್ | 05 | 6 |
| ಲಗ್ನ | ತುಲಾ | 4 | 54 |

ರಾಶಿ ನವಾಂಶ ಕುಂಡಲಿಗಳನ್ನು ಕೆಳಗೆ ಕೊಟ್ಟಿದೆ :

|  | ಸೂರ್ಯ<br>ಕುಜ, ಬುಧ<br>ಶುಕ್ರ | ಹೋರಾ<br>ಲಗ್ನ | ರಾಹು |
|---|---|---|---|
|  | ರಾಶಿ |  | ಶನಿ<br>ವರ್ಣದ ಲಗ್ನ<br>ಘಟಿಕಾ ಲಗ್ನ |
|  |  |  |  |
| ಚಂದ್ರ<br>ಗುರು<br>ಕೇತು |  | ಲಗ್ನ<br>ಆರೂಢ<br>ಲಗ್ನ |  |

|  |  | ಬುಧ<br>ರಾಹು | ಸೂರ್ಯ |
|---|---|---|---|
|  | ಅಂಶ |  |  |
| ಶನಿ |  |  | ಚಂದ್ರ |
|  |  | ಕಾರಕಾಂಶ<br>ಕುಜ, ಶುಕ್ರ<br>ಕೇತು, ಲಗ್ನ | ಗುರು |

ಗ್ರಹಗಳ ಸನ್ನಿವೇಶವನ್ನು ಇಳಿಮುಖವಾದ ಡಿಗ್ರಿಗಳ ಮೇರೆಗೆ ಪಟ್ಟಿ ಮಾಡಿದರೆ, ಈ ಚಿತ್ರ ಮೂಡುತ್ತದೆ:

| ಗ್ರಹ | ರಾಶಿ | ಡಿಗ್ರಿ | ನಿಮಿಷ |
|---|---|---|---|
| ಶುಕ್ರ | ಮೇಷ | 25 | 50 |
| ಕುಜ | ಮೇಷ | 25 | 31 |
| ಶನಿ | ಕಟಕ | 22 | 35 |
| ಗುರು | ಧನುಸ್ | 17 | 23 |
| ಚಂದ್ರ | ಧನುಸ್ | 15 | 46 |
| ಸೂರ್ಯ | ಮೇಷ | 9 | 56 |
| ಬುಧ | ಮೇಷ | 4 | 48 |

ಶುಕ್ರನದೇ ಅತ್ಯಂತ ಹೆಚ್ಚಿನ ಸ್ಪಷ್ಟವಾದ ಕಾರಣ ಅವನು ಆತ್ಮಕಾರಕನಾಗುತ್ತಾನೆ. ಇತರ ಕಾರಕಗಳು ಈ ರೀತಿ ಇರುತ್ತಾರೆ :

| ಕಾರಕ | ಅಧಿಪತಿ |
|---|---|
| ಆತ್ಮಕಾರಕ | ಶುಕ್ರ |
| ಅಮಾತ್ಯಕಾರಕ | ಕುಜ |
| ಭ್ರಾತೃಕಾರಕ | ಶನಿ |
| ಮಾತೃಕಾರಕ | ಗುರು |
| ಪುತ್ರಕಾರಕ | ಚಂದ್ರ |
| ಜ್ಞಾತಿಕಾರಕ | ಸೂರ್ಯ |
| ದಾರಕಾರಕ | ಬುಧ |

## 151. ವಿವಿಧ ಬಗೆಯ ಲಗ್ನಗಳು

ಜೈಮಿನಿ ಹೇಳುವ ವಿವಿಧ ಲಗ್ನಗಳ ಪೈಕಿ ಆರೂಢ ಲಗ್ನ ಹೋರಾ ಲಗ್ನ ವರ್ಣದ ಲಗ್ನ ಘಟಿಕಾ ಲಗ್ನಗಳು ಜಾತಕದ ನಿರ್ಣಯವನ್ನು ಮಾಡುವುದಕ್ಕೆ, ವಿಶೇಷತಃ ರಾಜಯೋಗಗಳನ್ನು ಅನ್ವಯಿಸುವುದಕ್ಕೆ ಪ್ರಾಮುಖ್ಯವಾದವು. ಆರೂಢ ಲಗ್ನವು ಜನ್ಮಲಗ್ನದಿಂದ ಲಗ್ನಾಧಿಪತಿಯು ಎಷ್ಟು ರಾಶಿಗಳ ದೂರದಲ್ಲಿರುತ್ತಾನೋ ಅಷ್ಟು ರಾಶಿಗಳನ್ನು ಲಗ್ನಾಧಿಪತಿಯಿಂದ ಎಣಿಸಿದರೆ ಬರುವ ರಾಶಿ. ಹೋರಾ ಲಗ್ನವು ಜನನಕಾಲದ ಸೂರ್ಯೋದಯಾದಿ ಘಟಿಗಳನ್ನು 2.5ರಿಂದ ಭಾಗಿಸಿ ಬರುವ ಭಾಗಲಬ್ಧಕ್ಕೆ ಒಂದಂಕವನ್ನು ಸೇರಿಸಿದರೆ

ಬರುವ ಸಂಖ್ಯೆಯಷ್ಟು ರಾಶಿಗಳನ್ನು ಲಗ್ನವು ಬೆಸವಾದರೆ ಸೂರ್ಯನಿಂದಲೂ ಸಮವಾದರೆ ಲಗ್ನದಿಂದಲೂ ಎಣಿಸಿದರೆ ಬರುವ ರಾಶಿ. ವರ್ಣದ ಲಗ್ನವನ್ನು **ಕಂಡುಹಿಡಿಯುವುದು ಹೀಗೆ :** ಜನ್ಮಲಗ್ನವು ಬೆಸವೋ ಸಮವೋ ಆಗಿರುವುದಕ್ಕೆ ಅನುಕ್ರಮವಾಗಿ ಮೇಷದಿಂದ ಅಥವಾ ಮೀನದಿಂದ ಗಡಿಯಾರದ ನೇರಕ್ಕೆ ಅಥವಾ ಅದಕ್ಕೆ ವಿರುದ್ಧ ಗತಿಯಲ್ಲಿ ಲಗ್ನದವರೆಗೆ ಎಣಿಸಿ. ಇದನ್ನು **ಅ** ಅನ್ನಿ. ಹೀಗೆ ಹೋರಾ ಲಗ್ನದಿಂದಲೂ ಎಣಿಸಿ. ಅದನ್ನು **ಇ** ಅನ್ನಿ. **ಅ** ಮತ್ತು **ಇ** ಇವೆರಡರ ಮೊತ್ತ ; ಅಥವಾ ವ್ಯತ್ಯಾಸ **ಉ** ಆಗುತ್ತದೆ—ಜನ್ಮಲಗ್ನ ಹೋರಾ ಲಗ್ನ ಎರಡೂ ಬೆಸನಾದರೆ ಮೊತ್ತ ; ಒಂದು ಸಮ ಒಂದು ಬೆಸ ಆದರೆ ವ್ಯತ್ಯಾಸ. ಮೇಷರಾಶಿಯಿಂದ ನೇರವಾಗಿಯೂ ಅಥವಾ ಮೀನ ರಾಶಿಯಿಂದ ಹಿಮ್ಮುಖವಾಗಿಯೂ—ಲಗ್ನವು ಬೆಸವೋ ಸಮವೋ ಆಗಿರುವ ಪ್ರಕಾರ— **ಉ** ಅಷ್ಟು ಎಣಿಸಿದರೆ ಬರುವ ರಾಶಿಯೇ ವರ್ಣದ ಲಗ್ನ. ಘಟಿಕಾ ಲಗ್ನವು, ಜನ್ಮ ಲಗ್ನ ರಾಶಿಯ ಮೊದಲ ಡಿಗ್ರಿಗೆ, ಜನನ ಕಾಲವನ್ನು 30ರಿಂದ ಗುಣಿಸಿ ಬರುವ ಗುಣಲಬ್ಧವನ್ನು ಸೇರಿಸಿದರೆ ದೊರಕುತ್ತದೆ.

ನಲವತ್ತೊಂಟನೆಯ ಉದಾಹರಣೆ : **ಹಿಟ್ಲರನ ಜಾತಕದಲ್ಲಿ ಆರೂಢ ಹೋರಾ ವರ್ಣದ ಭಾವ ಮತ್ತು ಘಟಿಕಾ ಲಗ್ನಗಳನ್ನು ಕಂಡುಹಿಡಿಯಿರಿ.**

**ಆರೂಢ ಲಗ್ನ :** ಲಗ್ನಾಧಿಪತಿ ಶುಕ್ರ ಸಪ್ತಮದಲ್ಲಿದ್ದಾನೆ. ಸಪ್ತಮ ದಿಂದ ಸಪ್ತಮವು ಲಗ್ನವೇ ಆಗುತ್ತದೆ. ಆದಕಾರಣ ಜನ್ಮಲಗ್ನವೇ ಆರೂಢ ಲಗ್ನ.

∴ ಆರೂಢ ಲಗ್ನ = ತುಲಾ

**ಹೋರಾ ಲಗ್ನ :** ಜನನ ಕಾಲದ ಘಟಿಗಳನ್ನು 2.5ರಿಂದ ಭಾಗಿಸಿದರೆ (33.5/3.5) = 13 ಭಾಗಲಬ್ಧವಾಗುತ್ತದೆ ಮತ್ತು .1 ಶೇಷವಾಗುತ್ತದೆ. 12ರಷ್ಟನ್ನು ತ್ಯಜಿಸಿ. ಜನ್ಮಲಗ್ನವು ಬೆಸನಾದ ಕಾರಣ ಸೂರ್ಯನಿಂದ 2 (ನ+1) ಸಲ ಎಣಿಸಿದರೆ ವೃಷಭವು ಹೋರಾ ಲಗ್ನವಾಗುತ್ತದೆ. ಶೇಷ .1ನ್ನು 3ರಿಂದ ಗುಣಿಸಿದರೆ 12° ದೊರಕುತ್ತದೆ.

∴ ಹೋರಾ ಲಗ್ನ = ವೃಷಭ 12°

**ಭಾವ ಲಗ್ನ :** ಜನ್ಮ ಲಗ್ನವು ತುಲಾ, ಬೆಸರಾಶಿ.

ಜನನ ಕಾಲದ ಘಟಿಗಳು = 33.5

∴ ನ = 33.5/5 = 6.7 = ಭಾಗಲಬ್ಧವು 6, ಶೇಷವು = 0.7.

∵ ಜನ್ಮ ಲಗ್ನವು ಬೆಸನಾದ ಕಾರಣ, ಭಾವ ಲಗ್ನವು ಸೂರ್ಯನಿಂದ 7 (6+1) ನೆಯ ಪಾದ—ತುಲಾ.

ಶೇಷವನ್ನು ಪರಿವರ್ತಿಸಿದರೆ 21° ದೊರಕುತ್ತದೆ.

ಭಾವ ಲಗ್ನ = ತುಲಾ 21°.

**ವರ್ಣದಾ ಲಗ್ನ** : ಜನ್ಮ ಲಗ್ನ ತುಲಾ, ಬೆಸರಾಶಿ. ಹೋರಾ ಲಗ್ನ ವೃಷಭ, ಸಮರಾಶಿ.

∵ ಅ = 7 (ಮೇಷದಿಂದ ಜನ್ಮ ಲಗ್ನದವರೆಗೆ ನೇರವಾದ ಎಣಿಕೆ)

ಇ = 11 (ಮೀನದಿಂದ ಹೋರಾ ಲಗ್ನದವರೆಗೆ ಹಿಮ್ಮುಖವಾದ ಎಣಿಕೆ)

∵ ಜನ್ಮ ಲಗ್ನ ಬೆಸ, ಹೋರಾ ಲಗ್ನವು ಸಮ ಆದಕಾರಣ, **ಅ** ಮತ್ತು **ಇ** ಅಂತರವನ್ನು ತೆಗೆದುಕೊಂಡರೆ 4 ಬರುತ್ತದೆ. ಜನ್ಮ ಲಗ್ನವು ಬೆಸನಾದ ಕಾರಣ ಮೇಷದಿಂದ 4 ಎಣಿಸಿದರೆ ಕಟಕ ರಾಶಿಯು ದೊರಕುತ್ತದೆ.

∴ ವರ್ಣದಾ ಲಗ್ನ = ಕಟಕ

**ಘಟಿಕಾ ಲಗ್ನ** : ಜನ್ಮ ಲಗ್ನವು ತುಲಾ

ಜನನ ಕಾಲದ ಘಟಿಗಳು = 33.5

ಜನನ ಕಾಲದ ಘಟಿಗಳನ್ನು 12ರಿಂದ ಭಾಗಿಸಿದರೆ

$\frac{33.5}{12} = 9.5$ ಭಾಗಲಬ್ಧವಾಗುತ್ತದೆ.

ಪೂರ್ಣಾಂಕ 9 (ನ), ಭಿನ್ನಾಂಕ 5. ಘಟಿಕಾ ಲಗ್ನವು ಜನ್ಮ ಲಗ್ನದಿಂದ ನ+1 (9+1) ಎಣಿಸಿದರೆ ಬರುವ ರಾಶಿಯಾಗುತ್ತದೆ.

∴ ಘಟಿಕಾ ಲಗ್ನ = ಕಟಕ 15°

ಪ್ರಾಣಪದ ಎಂಬುದು ಒಂದು ಸೂಕ್ಷ್ಮ ಬಿಂದು. ಜನನ ಕಾಲದ ವಿಘಟಿಗಳನ್ನು ದ್ವಿಗುಣಗೊಳಿಸಿ. ಸೂರ್ಯನು ಚರ ಸ್ಥಿರ ದ್ವಿಸ್ವಭಾವ ರಾಶಿಗಳ ಪೈಕಿ ಯಾವುದರಲ್ಲಿರುತ್ತಾನೋ ಅದರ ಮೇರೆಗೆ ಕ್ರಮವಾಗಿ (1) ಸೂರ್ಯನ ಸ್ಪಷ್ಟಕ್ಕೋ (2) ಸೂರ್ಯನ ಸ್ಪಷ್ಟ+240° ಕ್ಕೋ ; (3) ಸೂರ್ಯನ ಸ್ಪಷ್ಟ+120° ಕ್ಕೋ ಆ ದ್ವಿಗುಣಿತ ಅಂಕವನ್ನು ಸೇರಿಸಿ. ಬರುವ ಬಿಂದುವೇ ಪ್ರಾಣಪದ.

ದ್ವಾರರಾಶಿ ಎಂಬುದು ಜೀವನದ ಕೆಲವು ಘಟನೆಗಳನ್ನು ಅಥವಾ ಮಾರಕ ಕಾಲವನ್ನು ಕಂಡುಹಿಡಿಯುವ ಸಲುವಾಗಿ ಪರಿಶೀಲನೆಗೆ ತೆಗೆದು

ಕೊಂಡ ವಶೆಯ ರಾಶಿ. ಬಾಹ್ಯರಾಶಿಯು, ಲಗ್ನದಿಂದ ದ್ವಾರರಾಶಿಯು ಎಷ್ಟು ರಾಶಿಗಳಷ್ಟು ದೂರವಿರುತ್ತದೆಯೋ ದ್ವಾರರಾಶಿಯಿಂದ ಅಷ್ಟು ರಾಶಿಗಳಷ್ಟು ದೂರವಿರುವ ರಾಶಿ.

ಜೈಮಿನಿಯಲ್ಲಿ ಗುಳಿಕಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟಿದೆ. ಶನಿಗೆ ಯಾವ ದಿನ ಭಾಗವನ್ನು ಕೊಟ್ಟಿದೆಯೋ ಆ (ಅಂದರೆ ಅಹಃಪ್ರಮಾಣವನ್ನೋ ರಾತ್ರಿ ಪ್ರಮಾಣವನ್ನೋ 8ರಿಂದ ಭಾಗಿಸಿದರೆ ಬರುವ ಲಬ್ಧ) ಕಾಲದ ಅಧಿಪತಿಯೆಂದು ಗುಳಿಕನನ್ನು ಭಾವಿಸಲಾಗಿದೆ.

ಬ್ರಹ್ಮ ಮಹೇಶ್ವರ ರುದ್ರ ಸ್ಥಾನಗಳು ಕುಂಡಲಿಯಲ್ಲಿ ಗ್ರಹಗಳಿಗೆ ಇರುವ ವಿಶಿಷ್ಟ ಸನ್ನಿವೇಶಗಳಿಂದ ಲಭಿಸುವ ಪ್ರಶಸ್ತಿಗಳು. ಬ್ರಹ್ಮಸ್ಥಾನವು ಸ್ಥಿರದಶೆ ಬ್ರಹ್ಮದಶೆಗಳನ್ನು ಕಂಡುಹಿಡಿಯಲೂ ರುದ್ರ ಮಹೇಶ್ವರ ಸ್ಥಾನಗಳು ಮಾರಕ ರಾಶಿಯನ್ನು ಕಂಡುಹಿಡಿಯಲೂ ಮುಖ್ಯವಾದವು.

ನಲವತ್ತೊಂಬತ್ತನೆಯ ಉದಾಹರಣೆ: **ಹಿಟ್ಲರನ ಜಾತಕದಲ್ಲಿ ಗುಳಿಕ, ಬ್ರಹ್ಮ, ರುದ್ರ, ಮಹೇಶ್ವರರನ್ನು ಕಂಡುಹಿಡಿಯಿರಿ.**

**ಗುಳಿಕ** (ಅಂಕ 34) ವಾರದ ದಿವಸ: ಭಾನುವಾರ. ಅಹಃಪ್ರಮಾಣವಾದ 34.4 ಘಟಿಗಳನ್ನು 8ರಿಂದ ಭಾಗಿಸಿದರೆ 4.3 ಬರುತ್ತದೆ.

∴ ಶನಿಯ ಅವಧಿಯು ಸೂರ್ಯೋದಯದಿಂದ 4.3 ಘಟಿಗಳವರೆಗೆ.

∴ ಸೂರ್ಯೋದಯಾದಿ 4.3 ಘಟಿಗೆ ಸಲ್ಲುವ ಉದಯ ಅಂಶ (ಡಿಗ್ರಿ)ಕ್ಕೆ ಗುಳಿಕನ ಸ್ಥಾನ ಸಮನಾಗುತ್ತದೆ = ವೃಷಭ 17°57′.

**ಬ್ರಹ್ಮ :** (ಅಂಕ 35) : ಲಗ್ನ ಮತ್ತು ಸಪ್ತಮ ಇವುಗಳಲ್ಲಿ ಸಪ್ತಮವೇ ಪ್ರಬಲ = ಆ (ಅಂಕ 52) : ಆ ಇಂದ ಷಷ್ಠ, ಅಷ್ಟಮ ದ್ವಾದಶಗಳ ಅಧಿಪತಿಗಳು ಕ್ರಮವಾಗಿ ಬುಧ ಕುಜ ಗುರು, ಇವರ ಪೈಕಿ ಕುಜನೇ ಪ್ರಬಲತಮ. ತರುವಾಯ ಗುರು (ಅಂಕ 58). ಆದರೆ ಕುಜನು ದೃಗ್ಗೋಚರಾರ್ಧ (ಸಪ್ತಮದಿಂದ) ದಲ್ಲಿಲ್ಲದಿರುವ ಕಾರಣ, ಗುರುವು ಬ್ರಹ್ಮ. ಅವನು ಗೋಚರಾರ್ಧ ಗೋಳದಲ್ಲಿರುವುದಲ್ಲದೆ ಬೆಸರಾಶಿಯಲ್ಲೂ ಇದ್ದಾನೆ.

∴ ಬ್ರಹ್ಮನು ಗುರು.

**ಮಹೇಶ್ವರ :** (ಅಂಕ 38) ಆತ್ಮಕಾರಕನಿಂದ ಅಷ್ಟಮಾಧಿಪತಿ ಕುಜ ಸ್ವಕ್ಷೇತ್ರದಲ್ಲಿದ್ದಾನೆ. ದ್ವಾದಶಾಧಿಪತಿ ಗುರು. ಆದಕಾರಣ, ಆತ್ಮಕಾರಕನಿಂದ ಅಷ್ಟಮ ದ್ವಾದಶಾಧಿಪತಿಗಳು ಅಂದರೆ ಕುಜ ಗುರುಗಳ ಪೈಕಿ

ಪ್ರಬಲತರನನ್ನು ಆರಿಸಬೇಕಾಗಿದೆ. ಗುರು ಪ್ರಬಲತರ. ಆದಕಾರಣ ಮಹೇಶ್ವರನು ಗುರು.

**ರುದ್ರ** (ಅಂಕ 39) : ಲಗ್ನದಿಂದ ದ್ವಿತೀಯ ಅಷ್ಟಮ ಅಧಿಪತಿಗಳು ಕ್ರಮವಾಗಿ ಕುಜ ಮತ್ತು ಶುಕ್ರ. ಶುಕ್ರನು ಕುಜನಿಗಿಂತ ಪ್ರಬಲನಾದ ಕಾರಣ, ಅವನು ರುದ್ರ.

## 152. ದೃಷ್ಟಿಗಳು ಮತ್ತು ಅರ್ಗಳಗಳು

ಎಲ್ಲ ಚರರಾಶಿಗಳೂ, ಪಕ್ಕದ ರಾಶಿಗಳನ್ನು ಬಿಟ್ಟು, ಎಲ್ಲ ಸ್ಥಿರರಾಶಿಗಳನ್ನೂ ವೀಕ್ಷಿಸುತ್ತವೆ. ಎಲ್ಲ ಸ್ಥಿರರಾಶಿಗಳೂ, ಪಕ್ಕದುದನ್ನು ವಿನಾಯಿಸಿ, ಎಲ್ಲ ಚರರಾಶಿಗಳನ್ನೂ ವೀಕ್ಷಿಸುತ್ತವೆ. ಎಲ್ಲ ದ್ವಿಸ್ವಭಾವ ರಾಶಿಗಳೂ ಪರಸ್ಪರ ವೀಕ್ಷಿಸುತ್ತವೆ. ಅರ್ಗಳಗಳೆಂದರೆ ಜಾತಕದಲ್ಲಿರುವ ಶುಭ ಫಲಕಾರಿಗಳ ಕೈವಾಡಕ್ಕೆ ಒಡ್ಡಿ ಬರುವ ಅಡ್ಡಿಗಳು. ವೀಕ್ಷಕ ಗ್ರಹದಿಂದ ಅಥವಾ ಸ್ಥಾನದಿಂದ ಚತುರ್ಥ ದ್ವಿತೀಯ ಏಕಾದಶ ಪಂಚಮಗಳಲ್ಲಿರುವ ಗ್ರಹಗಳು ಅರ್ಗಳಗಳಾಗುತ್ತವೆ. ಇದಕ್ಕೆ ತದೇಕಕಾಲದಲ್ಲಿ ದಶಮ ದ್ವಾದಶ ತೃತೀಯ ನವಮಗಳಲ್ಲಿರುವ ಗ್ರಹಗಳು ಪ್ರತಿರೋಧಕವಾಗುತ್ತವೆ. ತೃತೀಯದಲ್ಲಿ ಹಲವು ಗ್ರಹಗಳಿದ್ದರೆ, ಅದು ಪಾಪಾರ್ಗಳವಾಗುತ್ತದೆ. ಕೇತು ಇದಕ್ಕೆ ವಿನಾಯಿತಿ. ಕೇತುವಿನಿಂದ ನವಮದಲ್ಲಿರುವ ಗ್ರಹಗಳು ಅರ್ಗಳವುಂಟು ಮಾಡುತ್ತವೆ. ಪಂಚಮದಲ್ಲಿ ಗ್ರಹಗಳಿದ್ದರೆ ಈ ಅರ್ಗಳವು ನಿವಾರಣೆಯಾಗುತ್ತದೆ. ಅರ್ಗಳಗಳ ಶುಭ ಪಾಪ ಸ್ವರೂಪವನ್ನು ತಿಳಿಯಲು ಅಂಕಗಳು 44 ಮತ್ತು 45 ನೋಡಿ.

ಐವತ್ತನೆಯ ಉದಾಹರಣೆ : **ಹಿಟ್ಲರನ ಜಾತಕದಲ್ಲಿ ಅರ್ಗಳಗಳನ್ನು ಕಂಡುಹಿಡಿದು ಅರ್ಗಳ ಚಕ್ರವನ್ನು ರಚಿಸಿ.**

ಹಿಟ್ಲರನ ಜಾತಕದಲ್ಲಿರುವ ಗ್ರಹಾರ್ಗಳಗಳು :

| ಗ್ರಹ | ಅರ್ಗಳಕಾರಿಗಳು | ಅರ್ಗಳ ನಿವಾರಕಗಳು |
|---|---|---|
| ರವಿ | ಶನಿ | ಯಾರೂ ಇಲ್ಲ. |
| ಚಂದ್ರ | ರವಿ, ಬುಧ, ಶುಕ್ರ, ಕುಜ | " |
| ಕುಜ | ಶನಿ | " |
| ಬುಧ | ಶನಿ | " |

| ಗ್ರಹ | ಅರ್ಗಳಕಾರಿಗಳು | ಅರ್ಗಳ ನಿವಾರಕರು |
|---|---|---|
| ಗುರು | ರವಿ, ಚಂದ್ರ, ಬುಧ, ಶುಕ್ರ, ಕುಜ | ಯಾರೂ ಇಲ್ಲ |
| ಶುಕ್ರ | ಶನಿ | " |
| ಶನಿ | ಯಾರೂ ಇಲ್ಲ | " |
| ರಾಹು | ಶನಿ, ರವಿ, ಬುಧ, ಶುಕ್ರ, ಕುಜ | " |
| ಕೇತು | ಯಾರೂ ಇಲ್ಲ | " |

| | | | |
|---|---|---|---|
| ಶನಿ, ರವಿ, ಕುಜ<br>ಶುಕ್ರ, ಬುಧ,<br>ರಾಹು (ಚಂದ್ರ,<br>(ಗುರು, ಕೇತು) | ಶನಿ | ರಾಹು.<br>(ರವಿ, ಕುಜ<br>ಶುಕ್ರ, ಬುಧ) | ಶನಿ, ರವಿ<br>ಕುಜ, ಶುಕ್ರ<br>ಬುಧ |
| ರಾಹು ಚಂದ್ರ ಗುರು ಕೇತು } (ರವಿ, ಬುಧ ಕುಜ ಶುಕ್ರ | ಅರ್ಗಳ ಚಕ್ರ | | |
| ಕುಜ<br>ರವಿ<br>ಶುಕ್ರ<br>ಬುಧ | | | ರಾಹು ಗುರು ಚಂದ್ರ ಕೇತು } ರವಿ ಕುಜ ಬುಧ ಶುಕ್ರ |
| ಕುಜ<br>ರವಿ<br>ಶುಕ್ರ<br>ಬುಧ | ಗುರು<br>ಚಂದ್ರ<br>ಕೇತು | | ಗುರು ಚಂದ್ರ ಕೇತು ಶನಿ } (ರಾಹು) |

ಮೇಲಿನ ಚಕ್ರದಲ್ಲಿ, ಶನಿಯನ್ನು ಮೇಷ ರಾಶಿಯಲ್ಲಿ ಹಾಕಿರುವುದು ಅವನು ಮೇಷ ರಾಶಿಗೂ ಅಲ್ಲಿರುವ ಗ್ರಹಗಳಿಗೂ ಉಂಟುಮಾಡುವ ಅರ್ಗಳವನ್ನು ಸೂಚಿಸುತ್ತದೆ. ಮತ್ತು ಶನಿಯುಂಟುಮಾಡುವ ಅರ್ಗಳಕ್ಕೆ ಯಾವ ಪ್ರತಿರೋಧಕವೂ ಇಲ್ಲದಿರುವುದನ್ನು ಗಮನಿಸತಕ್ಕುದು. ವೃಷಭದಲ್ಲಿ

ರಾಹು ಅರ್ಗಳವನ್ನುಂಟುಮಾಡಿದರೂ ಕೂಡ ಕಂಸಗಳಲ್ಲಿ (brackets) ಕೊಟ್ಟಿರುವ ಗ್ರಹಗಳು ಆ ಅರ್ಗಳಕ್ಕೆ ಪ್ರತಿರೋಧಕವನ್ನುಂಟುಮಾಡುತ್ತವೆ.

## 153. ರಾಶಿಗಳ ಬಲಾಬಲಗಳು

ಜೈಮಿನಿಯು ರಾಶಿಗಳಿಗೂ ಅವುಗಳ ಬಲಾಬಲಗಳಿಗೂ ವಿಶೇಷ ಮಹತ್ವವನ್ನು ಕೊಡುತ್ತಾನೆ. ರಾಶಿಯ ಬಲವು ಅದರ ಸ್ವಂತ ಬಲ+ ಅದರ ಅಧಿಪತಿಯ ಬಲ. ಅಧಿಪತಿಯ ಬಲವು ಈ ಅಂಶಗಳಿಂದ ಕೂಡಿದೆ ಯೆಂದು ಅಂದುಕೊಳ್ಳಬಹುದು : (1) ರಾಶಿ ಪ್ರಾರಂಭದಿಂದ ಗ್ರಹವಿರುವ ದೂರದ ಬಲವೇ ಸ್ವಕ್ಷೇತ್ರ, ಉಚ್ಚ, ನೀಚ ಇತ್ಯಾದಿ (ಅಂಕ 62), (2)ಸ್ಥಾನ ಗಳ ಬಲ ಮತ್ತು (3) ಆತ್ಮಕಾರಕನ ಅಪೇಕ್ಷ್ಯ ಗ್ರಹದ ಸ್ಥಾನಕ್ಕೆ ಸಲ್ಲುವ ವಿಶೇಷ ಬಲ. ರಾಶಿಬಲವು ಈ ಅಂಶಗಳಿಂದ ಲಭಿಸುತ್ತದೆ : (1) ಅದರ ಸಂಬಂಧ ಪಡೆದಿರುವ ಗ್ರಹ ಅಥವಾ ಗ್ರಹಗಳು ; (2) ಚರಸ್ಥಿರ ದ್ವಿಸ್ವಭಾವ ಲಕ್ಷಣ, (3) ಗುರುವಿನ ಬುಧನ ಅಥವಾ ಸ್ವಾಧಿಪತಿಯ ವೀಕ್ಷಣ ಅಥವಾ ಸಂಬಂಧ. ರಾಶಿ ಬಲವು ಸ್ವಂತ ಬಲ ಸ್ವಾಧಿಪತಿಯ ಬಲಗಳ ಮೊತ್ತ. ಆತ್ಮಕಾರಕನಿರುವ ರಾಶಿಗೆ ವಿಶೇಷ ಬಲವುಂಟಾಗುತ್ತದೆ. ರಾಶಿ ಬಲವನ್ನು ಕಂಡುಹಿಡಿಯಲು ನಾವು ಹೋದಿಸಿ ಕೊಟ್ಟಿರುವ ಸಂಖ್ಯಾ ವಿಧಾನವನ್ನು ಅಂಕ 61ರಲ್ಲಿ ವಿವರಿಸಿದೆ.

ಐವತ್ಮೂರನೆಯ ಉದಾಹರಣೆ : **ಹಿಟ್ಲರನ ಜಾತಕದಲ್ಲಿ ರಾಶಿಬಲ ಗ್ರಹಬಲಗಳನ್ನು ಹೊಸ ವಿಧಾನದ ಮೂಲಕ ಕಂಡುಹಿಡಿಯಿರಿ.**

ಗ್ರಹ ಬಲಗಳು

| ಗ್ರಹ | ಮೂಲ ತ್ರಿಕೋಣ ಬಲ | ಅಂಶ ಬಲ | ಕೇಂದ್ರ ಬಲ | ಮೊತ್ತ |
|---|---|---|---|---|
| ರವಿ | 60.0 | 7.5 | 60 | 127.5 |
| ಚಂದ್ರ | 15.0 | 15.0 | 15 | 45.5 |
| ಕುಜ | 30.0 | 45.0 | 60 | 135.0 |
| ಬುಧ | 15.0 | 3.75 | 60 | 78.75 |
| ಗುರು | 30.0 | 22.5 | 15 | 66.5 |
| ಶುಕ್ರ | 15.0 | 60.0 | 60 | 135.0 |
| ಶನಿ | 7.5 | 30.0 | 60 | 97.5 |

ರಾಶಿ ಬಲ

| ರಾಶಿ | ಚರ ಬಲ | ದೃಕ್ ಬಲ | ಸ್ಥಿರ ಬಲ | ಅಧಿಪತಿ | ಮೊತ್ತ |
|---|---|---|---|---|---|
| ಮೇಷ | 15.0 | 60+60 | 105.0 | 135.0 | 375+60.* |
| ವೃಷಭ | 30.0 | " | " | 135.0 | 165.0 |
| ಮಿಥುನ | 60.0 | 60.0 | 60.0 | 78.75 | 258.75 |
| ಕಟಕ | 15.0 | " | 60.0 | 45.0 | 120.0 |
| ಸಿಂಹ | 30.0 | 60+60 | " | 127.5 | 275.5 |
| ಕನ್ಯಾ | 60.0 | 60.0 | " | 75.75 | 195.75 |
| ತುಲಾ | 15.0 | " | " | 135.0 | 150.0 |
| ವೃಶ್ಚಿಕ | 30.0 | 60+60 | " | 135.0 | 285.0 |
| ಧನುಸ್ | 60.0 | 60+60 | 90.0 | 67.5 | 337.5 |
| ಮಕರ | 15.0 | " | " | 97.5 | 112.5 |
| ಕುಂಭ | 30.0 | 60+60 | " | 97.5 | 247.5 |
| ಮೀನ | 60.0 | 60+60 | " | .97.5 | 247.5 |

## 154. ದಶಾಭುಕ್ತಿಗಳು

ಜೈಮಿನಿಯು ಪ್ರಶಂಸಿಸಿರುವ ವಿವಿಧ ದಶಾ ವಿಧಾನಗಳು ಯಾವಾಗಲೂ ರಾಶಿಗಳಿಗೇ ಅನ್ವಯವಾದವು. ಈ ಪೈಕಿ ಜೈಮಿನಿಗೆ ಅಚ್ಚುಮೆಚ್ಚಿನ ದಶಾ ವಿಧಾನ ಚರ ಪರ್ಯಾಯ ದಶೆ ಎಂದು ಕಾಣುತ್ತದೆ. ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಧನುಸ್ ಸವ್ಯ ಪಂಗಡಕ್ಕೆ ಸೇರಿದ ರಾಶಿಗಳು. ಉಳಿದವು ಅಪಸವ್ಯ ಗುಂಪಿನವು. ಯಾವುದೇ ದಶೆಯನ್ನು ಎಣಿಕೆ ಮಾಡು ವಾಗ, ಎರಡು ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ದಶೆಗಳ ಅನುಕ್ರಮ ಮತ್ತು ದಶಾವಧಿಗಳ ಕಾಲಮಿತಿ. ಏಕೆಂದರೆ ಇವು ಪ್ರತಿ ಕುಂಡಲಿಗೂ ತಕ್ಕಂತೆ ಬದಲಾವಣೆ ಆಗುತ್ತವೆ. ಆದರೆ ಸ್ಥಿರದಶೆ ಶೂಲದಶೆಗಳ ಅವಧಿಗಳು ಮಾತ್ರ ಬದಲಾವಣೆ ಆಗುವುದಿಲ್ಲ. ಚರದಶೆಯನ್ನು ತೆಗೆದುಕೊಂಡರೆ, ಪ್ರಥಮ ದಶೆಯು ಲಗ್ನ ರಾಶಿಯಿಂದ ತಪ್ಪದೆ ಪ್ರಾರಂಭವಾಗುತ್ತದೆ. ದಶೆ

* ಮೇಷಕ್ಕೆ ಆತ್ಮಕಾರಕನ ಸಲುವಾಗಿ 60ನ್ನು ಸೇರಿಸಿ.

ಗಳು ನಡೆಯುವ ಅನುಕ್ರಮವು. ಲಗ್ನದಿಂದ ನವಮ ರಾಶಿಯು ಸವ್ಯ ಗುಂಪಿಗೆ ಸೇರುತ್ತದೆಯೋ ಅಪಸವ್ಯ ಗುಂಪಿಗೆ ಸೇರುತ್ತದೆಯೋ ಅದರ ಪ್ರಕಾರ ನೇರ ಕ್ರಮದಲ್ಲೋ ಹಿಮ್ಮುಖವಾಗಿಯೋ ಇರುತ್ತದೆ. ಯಾವುದೊಂದು ರಾಶಿಯ ಅವಧಿಯೂ ಆ ರಾಶಿಗೂ ಅದರ ಅಧಿಪತಿಗೂ ಇರುವ ರಾಶಿಗಳ ಅಂತರದ ಸಂಖ್ಯೆಗೆ—ಈ ಅಂತರವನ್ನು ಆ ರಾಶಿಯು ಸವ್ಯವಾದರೆ ಗಡಿಯಾರದ ಕ್ರಮದಲ್ಲೂ, ಅಪಸವ್ಯವಾದರೆ ಗಡಿಯಾರಕ್ಕೆ ಪ್ರತಿಕೂಲಕ್ರಮದಲ್ಲೂ ಎಣಿಸಬೇಕು —ಸಮಾನವಾಗುತ್ತದೆ. ರಾಶಿಯ ಅಧಿಪತಿಯು ಉಚ್ಚನಾದರೆ, ದಶಾವಧಿಯು ಒಂದು ವರ್ಷದಷ್ಟು ಹೆಚ್ಚುವರಿಯಾಗುತ್ತದೆ; ನೀಚನಾದರೆ ಒಂದು ವರ್ಷ ಕಡಿಮೆಯಾಗುತ್ತದೆ. ಕುಂಭ ವೃಶ್ಚಿಕಗಳಿಗೆ ಎರಡೆರಡು ಅಧಿಪತಿಗಳಿರುವ ಕಾರಣ, ಅವುಗಳ ದಶಾವಧಿಗಳನ್ನು ಗುಣಿಸುವುದರಲ್ಲಿ ಕೊಂಚ ವ್ಯತ್ಯಾಸವಾಗುತ್ತದೆ.

ಭುಕ್ತಿಯ ಅವಧಿಯು ದಶೆಯ ಅವಧಿಯ ಹನ್ನೆರಡನೆಯ ಒಂದು ಭಾಗ. ಯಾವ ರಾಶಿಯ ಭುಕ್ತಿ ಬೇಕೋ ಅದರಿಂದ ನವಮವು ಸವ್ಯಕ್ಕೆ ಅನ್ವಯವಾದರೆ ಭುಕ್ತಿಗಳು ನಡೆಯುವ ಅನುಕ್ರಮವು ನೇರವಾಗಿರುತ್ತದೆ: ಮೊದಲನೆಯ ಭುಕ್ತಿಯು ರಾಶಿಯ ದ್ವಿತೀಯದ್ದು. ಅಪಸವ್ಯಕ್ಕೆ ಅನ್ವಯವಾದರೆ, ರಾಶಿಯ ದ್ವಾದಶದಿಂದ ಹಿಮ್ಮುಖವಾಗಿ ಅನುಕ್ರಮವು ನಡೆಯುತ್ತದೆ.

ಸ್ಥಿರದಶಾ ವಿಧಾನದಲ್ಲಿ, ಚರರಾಶಿಗೆ 7, ಸ್ಥಿರರಾಶಿಗೆ 4, ದ್ವಿಸ್ವಭಾವ ರಾಶಿಗೆ 9 ವರ್ಷಗಳ ಅವಧಿ ದೊರಕುತ್ತದೆ. ಬ್ರಹ್ಮನಿರುವ ರಾಶಿಯಿಂದ ದಶಾರಂಭ. ಇತರ ದಶೆಗಳು ನೇರ ಕ್ರಮದಲ್ಲಿ ನಡೆಯುತ್ತವೆ. ತ್ರಿಕೋಣ ದಶೆಯು ಲಗ್ನ ಪಂಚಮ ನವಮಗಳ ಪೈಕಿ ಯಾವುದು ಪ್ರಬಲತಮ ರಾಶಿಯೋ ಅಲ್ಲಿಂದ ಪ್ರಾರಂಭವಾಗುತ್ತದೆ. ಇತರ ದಶೆಗಳು ಪ್ರಾರಂಭ ದಶೆಯು ಸವ್ಯವೋ ಅಪಸವ್ಯವೋ ಅದಂತೆ ನೇರವಾಗಿಯೋ ಹಿಮ್ಮುಖವಾಗಿಯೋ ಸಾಗುತ್ತವೆ. ರಾಶಿಯ ದಶಾವಧಿಯು ಚರದಶೆಯಲ್ಲಿದ್ದಂತೆಯೇ ಹೆಚ್ಚಿನ ವಿವರಗಳಿಗೆ ಅಂಕ 62ನ್ನು ನೋಡಿ.

ವರ್ಣದ ದಶೆಯಲ್ಲಿ, ಲಗ್ನದಿಂದಲೇ ದಶಾರಂಭ. ಲಗ್ನ ಬೆಸವಾದರೆ ನೇರ ಕ್ರಮ. ಲಗ್ನ ಸಮವಾದರೆ, ದಶೆಗಳು ದ್ವಾದಶದಿಂದ ಪ್ರಾರಂಭವಾಗಿ ಹಿಮ್ಮುಖವಾಗಿ ನಡೆಯುತ್ತವೆ. ದಶೆಯ ಅವಧಿಯು ಲಗ್ನದಿಂದ ವರ್ಣದ

ಲಗ್ನದವರೆಗೆ ಇರುವ ರಾಶಿಗಳ ಸಂಖ್ಯೆಗೆ ಸಮಾನ. ಬ್ರಹ್ಮದಶೆಯು ಬ್ರಹ್ಮ ರಾಶಿಯಿಂದ ನೇರವಾಗಿ ನಡೆಯುತ್ತದೆ ಅಥವಾ ಬ್ರಹ್ಮನಿಗೆ ಸಪ್ತಮದಿಂದ ಪ್ರಾರಂಭವಾಗಿ ಹಿಮ್ಮುಖವಾಗಿ ನಡೆಯುತ್ತದೆ—ಲಗ್ನವು ಬೆಸವೋ ಸಮವೋ ಆಗಿರುವ ಪ್ರಕಾರ. ದಶೆಯ ಅವಧಿಯು, ಕುರಿತ ರಾಶಿಯಿಂದ ಯಾವ ರಾಶಿಯಲ್ಲಿ ಕುರಿತ ರಾಶಿಗೆ ಷಷ್ಠಾಧಿಪತಿಯಾದ ಗ್ರಹವು ಇರುತ್ತಾನೋ ಆ ರಾಶಿಯವರೆಗೆ ಇರುವ ಅಂತರವಾಗುತ್ತದೆ. ಯೋಗಾರ್ಧದಶೆಯ ರಾಶಿದಶಾವಧಿಯು ಅವರ ಚರ ಸ್ಥಿರ ದಶಾವಧಿಗಳ ಸರಾಸರಿಗೆ ಸಮಾನ. ಮೊದಲ ದಶೆಯು (ಲಗ್ನ ಸಪ್ತಮಗಳಲ್ಲಿ ಯಾವುದು ಪ್ರಬಲವೋ) ಆ ರಾಶಿಯು ಬೆಸವೋ ಸಮವೋ ಆಗಿರುವ ಕ್ರಮಕ್ಕೆ ತಕ್ಕಂತೆ ದಶೆಗಳು ನಡೆಯುವ ಅನುಕ್ರಮವು ನೇರವೋ ಹಿಮ್ಮುಖವೋ ಆಗಿರುತ್ತದೆ. ನಿರ್ಯಾಣ ಶೂಲ ದಶೆಯು ಗಮನಾರ್ಹವಾದಷ್ಟು ಪ್ರಾಮುಖ್ಯವುಳ್ಳದ್ದು. ಅದನ್ನು ಜಾತಕನ ಮತ್ತು ಅವನ ಬಂಧುಗಳ ಜೀವಾವಧಿಯನ್ನು ಕಂಡುಹಿಡಿಯಲು ಬಳಸಲಾಗುತ್ತಿದೆ.

ಐವತ್ತೆರಡನೆಯ ಉದಾಹರಣೆ : **ಹಿಟ್ಲರನ ಜಾತಕದಲ್ಲಿ (1) ಚರದಶೆ, (2) ಸ್ಥಿರದಶೆ, (3) ತ್ರಿಕೋಣ ದಶೆ, (4) ಬ್ರಹ್ಮದಶೆ, (5) ವರ್ಣದ ದಶೆ, (6) ನಿರ್ಯಾಣ ಶೂಲ ದಶೆಗಳನ್ನು ಕಂಡುಹಿಡಿಯಿರಿ.**

ಹಿಟ್ಲರನ ಜಾತಕದ ರಾಶಿದಶೆಗಳ ಪಟ್ಟಿ

ಚರದಶೆ :

| | |
|---|---|
| ತುಲಾ | 6 ವರ್ಷಗಳು |
| ವೃಶ್ಚಿಕ* | 5 ವರ್ಷಗಳು |
| ಧನುಸ್ | 12 ವರ್ಷಗಳು |
| ಮಕರ | 6 ವರ್ಷಗಳು |

* ಸಹಾಧಿಪತಿಗಳಾದ ಕುಜ ಕೇತುಗಳ ಪೈಕಿ ಕೇತುವು ಗಣನೀಯ. ಏಕೆಂದರೆ ಹೆಚ್ಚು ಗ್ರಹಗಳೊಡಗೂಡಿದ್ದಾನೆ (ಅಂಕ 85 ನೋಡಿ).

ಚರದಶೆ :

| | | |
|---|---|---|
| ಕುಂಭ** | 8 | ವರ್ಷಗಳು |
| ಮೀನ | 36 | " |
| ಮೇಷ | 12 | " |
| ವೃಷಭ | 11 | " |
| ಮಿಥುನ | 10 | " |
| ಕಟಕ | 7 | " |
| ಸಿಂಹ | 5 | " |
| ಕನ್ಯಾ | 5 | " |

**ಸ್ಥಿರದಶೆ**

ಬ್ರಹ್ಮನಿರುವ ರಾಶಿಯಿಂದ ಸ್ಥಿರದಶೆಯು ಪ್ರಾರಂಭವಾಗುವುದರಿಂದ, ವಿವಿಧ ರಾಶಿದಶೆಗಳು ನಡೆಯುವ ಅನುಕ್ರಮವು ಮುಂದಿನಂತೆ ಇರುತ್ತದೆ (ಅಂಕ 90ನ್ನು ನೋಡಿ).

| | | | | |
|---|---|---|---|---|
| 1 | ನೆಯ ದಶೆ | ಧನುಸ್ | 9 | ವರ್ಷಗಳು |
| 2 | " | ಮಕರ | 7 | " |
| 3 | " | ಕುಂಭ | 8 | " |
| 4 | " | ಮೀನ | 9 | " |
| 5 | " | ಮೇಷ | 7 | " |
| 6 | " | ವೃಷಭ | 8 | " |
| 7 | " | ಮಿಥುನ | 9 | " |
| 8 | " | ಕಟಕ | 7 | " |
| 9 | " | ಸಿಂಹ | 8 | " |
| 10 | " | ಕನ್ಯಾ | 9 | " |
| 11 | " | ತುಲಾ | 7 | " |
| 12 | " | ವೃಶ್ಚಿಕ | 8 | " |
| | | ಒಟ್ಟು | 96 | |

** ಕುಂಭಾಧಿಪತಿಗಳಾದ ರಾಹು ಶನಿ ಬೇರೆ ರಾಶಿಗಳಲ್ಲಿದ್ದಾರೆ. ಆದಕಾರಣ ನಾವು ಅಂಕ 85ನ್ನು ಅನ್ವಯಿಸಬೇಕು. ಇಬ್ಬರಿಗೂ ಸಂಗಡಿಗರಿಲ್ಲ. ಆದರೆ ರಾಹುವು ಹೆಚ್ಚು ಪ್ರಾಬಲ್ಯವುಳ್ಳ ರಾಶಿಯಲ್ಲಿದ್ದಾನೆ. ಅಲ್ಲದೆ ದಶಾವಧಿಗೆ ಹೆಚ್ಚು ವರ್ಷಗಳ ಕಾಲವನ್ನು ಕೊಡುತ್ತಾನೆ.

**ತ್ರಿಕೋಣ ದಶೆ** (ಅಂಕ 92).

ಮೂರು ತ್ರಿಕೋಣಗಳ ಪೈಕಿ ನವಮವೇ ಪ್ರಬಲತಮ. ಅದು ದ್ವಿಸ್ವಭಾವ ರಾಶಿ; ಅಲ್ಲದೆ ಅದರಲ್ಲಿ ಒಂದು ಗ್ರಹವಿದೆ; ಮಿಥುನವು ಸಮ್ಯಗುಂಪಿಗೆ ಸೇರುತ್ತದಾದಕಾರಣ, ದಶೆಗಳು ಮುಂದೆ ತೋರಿಸಿರುವಂತೆ ನೇರ ಕ್ರಮದಲ್ಲಿ ನಡೆಯುತ್ತವೆ:—

| | | |
|---|---|---|
| 1ನೆಯ ದಶೆ | ಮಿಥುನ | 10 ವರ್ಷಗಳು |
| 2 " | ತುಲಾ | 6 " |
| 3 " | ಕುಂಭ | 8 " |
| 4 " | ಕಟಕ | 7 " |
| 5 " | ವೃಶ್ಚಿಕ | 5 " |
| 6 " | ಮೀನ | 3 " |
| 7 " | ಸಿಂಹ | 5 " |
| 8 " | ಧನುಸ್ | 12 " |
| 9 " | ಮೇಷ | 12 " |
| 10 " | ಕನ್ಯಾ | 5 " |
| 11 " | ಮಕರ | 6 " |
| 12 " | ವೃಷಭ | 11 " |

**ಬ್ರಹ್ಮ ದಶೆ** (ಅಂಕ 95)

ಲಗ್ನವು ಬೆಸ. ಆದಕಾರಣ ಬ್ರಹ್ಮರಾಶಿಯಿಂದ ದಶಾರಂಭ. ದಶೆಗಳು ನಡೆಯುವುದು ನೇರ ಕ್ರಮದಲ್ಲಿ. ಧನುಸ್ಸಿನಿಂದ ಮೊದಲುಗೊಂಡು ಪ್ರತಿ ರಾಶಿಯೂ ಆಯುರ್ದಾಯಕ್ಕೆ ಕೊಡುವ ಅವಧಿಯನ್ನು ಕೆಳಗೆ ಕೊಟ್ಟಿದೆ:—

| | |
|---|---|
| ಧನುಸ್ | 4 ವರ್ಷಗಳು |
| ಮಕರ | 3 " |
| ಕುಂಭ | 10 " |
| ಮೀನ | 1 " |
| ಮೇಷ | 12 ' |
| ವೃಷಭ | 11 " |

| | |
|---|---|
| ಮಿಥುನ | 10 ವರ್ಷಗಳು |
| ಕಟಕ | 5 " |
| ಸಿಂಹ | 11 " |
| ಕನ್ಯಾ | 10 " |
| ತುಲಾ | 2 " |
| ವೃಶ್ಚಿಕ | 5 " |

**ನಿರ್ಯಾಣ ಶೂಲ ದಶೆ** (ಅಂಕ 97)

ಹಿಟ್ಲರನ ಜಾತಕದಲ್ಲಿ ಲಗ್ನವು ಬೆಸವಾದಕಾರಣ, ಲಗ್ನದಿಂದಲೇ ದಶಾರಂಭ—ತುಲಾ, ವೃಶ್ಚಿಕ, ಧನುಸ್ ಹೀಗೆ ಕನ್ಯಾತನಕ. ಪ್ರತಿ ರಾಶಿಯೂ ತಲಾ 9 ವರ್ಷಗಳನ್ನು ನೀಡುತ್ತದೆ.

ವರ್ಣದ ದಶೆ (ಅಂಕ 94)

ಲಗ್ನವು ಬೆಸ. ತುಲಾ ಲಗ್ನದಿಂದ ದಶಾರಂಭ.

ಜನ್ಮ ಲಗ್ನವು ತುಲಾ

ವರ್ಣದ ಲಗ್ನವು ಕಟಕ.

ತುಲಾದಿಂದ ಕಟಕದವರೆಗೆ ನೇರವಾಗಿ ಎಣಿಸಿದರೆ, ಮೊದಲನೆಯ ವರ್ಣದ ದಶೆಯು ಅವಧಿಯು 10 ವರ್ಷಗಳಾಗುತ್ತವೆ. ಎರಡನೆಯ ವರ್ಣದ ದಶೆಯನ್ನು ಕಂಡುಹಿಡಿಯಲು ದ್ವಿತೀಯ ವರ್ಣದ ಲಗ್ನವನ್ನು ಅಂದರೆ ವೃಶ್ಚಿಕವನ್ನು ನಾವು ಅಂಕ 23ರ ಪ್ರಕಾರ ಗೊತ್ತುಮಾಡಬೇಕು.

ಲಗ್ನದಿಂದ ದ್ವಿತೀಯ ರಾಶಿ = ವೃಶ್ಚಿಕ (ಸಮ)

ಹೋರಾ ಲಗ್ನದಿಂದ " = ಮಿಥುನ (ಬೆಸ)

∴ ಅ = 5

ಇ = 3

ಉ = 2

ಲಗ್ನದಿಂದ ದ್ವಿತೀಯವು ಸಮರಾಶಿಯಾದ ಕಾರಣ, ಮೀನದಿಂದ ದ್ವಿತೀಯವು (ಉ) ಅಂದರೆ ಕುಂಭವು ದ್ವಿತೀಯಕ್ಕೆ ವರ್ಣದ ಆಗುತ್ತದೆ. ಈಗ ಎರಡನೆಯ ವರ್ಣದ ದಶೆಯ ಅವಧಿಯನ್ನು ತಿಳಿಯಲು ತುಲಾದಿಂದ ಕುಂಭದ ವರೆಗೆ ಎಣಿಸಿ. 5 ವರ್ಷಗಳು ಆಗುತ್ತವೆ. ಇದೇ ರೀತಿಯಲ್ಲಿ ಇತರೇ ವರ್ಣದ ರಾಶಿಗಳ ಅವಧಿಗಳನ್ನು ಕಂಡುಹಿಡಿಯತಕ್ಕದು.

## 155. ಆಯುರ್ದಾಯ

ಆಯುರ್ದಾಯವನ್ನು (ಅ) ಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿ, (ಇ) ಲಗ್ನ ಮತ್ತು ಚಂದ್ರ ಮತ್ತು (ಉ) ಲಗ್ನ ಮತ್ತು ಹೋರಾ ಲಗ್ನ— ಇವುಗಳಿಂದ ತಿಳಿಯಬೇಕಾಗಿದೆ. ಜಾತಕನ ಅಲ್ಪಾಯು, ಮಧ್ಯಾಯು, ಪೂರ್ಣಾಯುರ್ದಾಯವನ್ನು ಮೇಲೆ ಸೂಚಿಸಿರುವ ಆರು ಅಂಶಗಳು ಚರ ಸ್ಥಿರ ದ್ವಿಸ್ವಭಾವ ರಾಶಿಗಳಲ್ಲಿ ಯಾವ ಸನ್ನಿವೇಶದಲ್ಲಿರುತ್ತವೆ ಎಂಬುದರಿಂದ ವ್ಯಕ್ತಪಡಿಸುತ್ತವೆ. ಮೇಲೆ ಸೂಚಿಸಿರುವ ಮೂರು ಜೋಡಿಗಳೂ ಮೂರು ಬಗೆಯ ಆಯುರ್ದಾಯವನ್ನು ಸೂಚಿಸಿದರೆ, ಆ ಪೈಕಿ ಲಗ್ನ ಹೋರಾ ಲಗ್ನ ಸೂಚಿತವಾದ ಆಯುರ್ದಾಯವನ್ನು ಪುರಸ್ಕರಿಸಿ. ಅಂಥ ಸಂದರ್ಭದಲ್ಲಿ, ಚಂದ್ರ ಲಗ್ನದಲ್ಲೋ ಸಪ್ತಮದಲ್ಲೋ ಇದ್ದರೆ, (3) ಸೂಚಿಸುವ ಅವಧಿಯನ್ನು ಗಣನೆಗೆ ತೆಗೆದುಕೊಳ್ಳಿ ; ಇಲ್ಲವಾದರೆ, ಯಾವ ಆಯುರ್ದಾಯಕ್ಕೆ ಹೆಚ್ಚಿನ ಸೂಚನೆಗಳು ಕಂಡುಬರುತ್ತವೆಯೋ ಅದಕ್ಕೆ ಮನ್ನಣೆ ಕೊಡಿ. ಬೇರೊಂದು ವಿಧಾನದ ಪ್ರಕಾರ (ಅಂಕ 110), ಲಗ್ನದಿಂದ ಅಷ್ಟಮಾಧಿಪತಿ ಮತ್ತು ಸಪ್ತಮದಿಂದ ಅಷ್ಟಮಾಧಿಪತಿ ಈ ಗ್ರಹಗಳ ಪೈಕಿ ಯಾವುದು ಪ್ರಬಲತರವೋ ಆ ಗ್ರಹವು ಕೇಂದ್ರ, ಪಣಪರ, ಆಪೋಕ್ಲಿಮಗಳಲ್ಲಿರುವುದಕ್ಕೆ ಅನುಕ್ರಮವಾಗಿ ಅಲ್ಪ ಮಧ್ಯ ಪೂರ್ಣಾಯುರ್ದಾಯವು ಉಂಟಾಗುತ್ತದೆ. ಅಂಕ 111ರಲ್ಲಿ ಸೂಚಿತವಾದ ಮೂರನೆಯ ವಿಧಾನದ ಪ್ರಕಾರ, ಆತ್ಮ ಕಾರಕನಿಂದ ಅಷ್ಟಮಾಧಿಪತಿ ದ್ವಿತೀಯಾಧಿಪತಿಗಳ ಪೈಕಿ ಪ್ರಬಲನಾದ ಗ್ರಹವನ್ನು ಪುರಸ್ಕರಿಸಬೇಕು. ಪೂರ್ವಾಪರಗಳನ್ನು ಕರಾರುವಾಕ್ಕಾಗಿ ಪರಿಶೀಲಿಸಿ, ಆಯುರ್ದಾಯವನ್ನು ಜಾಗರೂಕತೆಯಿಂದ ಖಚಿತಗೊಳಿಸಬೇಕು. ಒಂದು ಅವಧಿಯ ಆಯುರ್ದಾಯವು ಹೆಚ್ಚು ಕಡಿಮೆ ಆಗಲು ಸಾಧ್ಯ. ಅಂಥ ಕಕ್ಷೆ ವೃದ್ಧಿ ಕಕ್ಷಹ್ರಾಸ ಆಗುವುದಕ್ಕೆ ಇರುವ ಉಪಾಧಿಗಳನ್ನು ಅಂಕ 113 ಮುಂತಾದ ಕ್ರಮಗಳಲ್ಲಿ ಕೊಟ್ಟಿದೆ.

ಐವತ್ತಮೂರನೆಯ ಉದಾಹರಣೆ : **ಹಿಟ್ಲರನ ಜಾತಕದಲ್ಲಿ ಆಯುರ್ದಾಯವನ್ನು ಕಂಡುಹಿಡಿಯಿರಿ.**

**ಆಯುರ್ದಾಯ** (ಅಂಕ 103)

(1) ಹಿಟ್ಲರನ ಜಾತಕವು ಪೂರ್ಣಾಯು, ಮಧ್ಯಾಯು, ಅಥವಾ ಅಲ್ಪಾಯು ಯಾವುದೆಂದು ತೀರ್ಮಾನಿಸಲು ಗಣನೆಗೆ ತೆಗೆದುಕೊಳ್ಳಬೇಕಾದ

ಮೂರು ಜೋಡಿಗಳು ಇವು : (1) ಲಗ್ನ ಅಷ್ಟಮಗಳ ಅಧಿಪತಿಯಾದ ಶುಕ್ರ, (2) ತುಲಾ ಲಗ್ನ ಮತ್ತು ಚಂದ್ರ ಮತ್ತು (3) ತುಲಾ ಲಗ್ನ, ವೃಷಭ ಹೋರಾ ಲಗ್ನ.

| | ಅಂಕ 82<br>ಅಲ್ಪ | ಅಂಕ 83<br>ಮಧ್ಯ | ಅಂಕ 84<br>ಪೂರ್ಣ |
|---|---|---|---|
| ಲಗ್ನಾಧಿಪತಿ—ಶುಕ್ರ | ... | ... | ... |
| ಅಷ್ಟಮಾಧಿಪತಿ—ಶುಕ್ರ | × | × | ಪೂರ್ಣ |
| ಲಗ್ನ—ತುಲಾ | ... | ... | ... |
| ಚಂದ್ರ—ಧನುಸ್ | ಅಲ್ಪ | × | × |
| ಲಗ್ನ—ತುಲಾ | ... | ... | ... |
| ಹೋರಾ—ವೃಷಭ | × | ಮಧ್ಯ | × |

ಮೇಲಿನ ಪಟ್ಟಿಯು ತೋರಿಸುವಂತೆ ಮೂರು ಜೋಡಿಗಳೂ ಮೂರು ಬಗೆಯ ಆಯುರ್ದಾಯವನ್ನು ಸೂಚಿಸುತ್ತವೆ. ಆದಕಾರಣ ಅಂಕ 107ರ ಮೇರೆಗೆ ಲಗ್ನ ಮತ್ತು ಹೋರಾ ಲಗ್ನ ಸೂಚಿಸುವ ಮಧ್ಯಾಯುರ್ದಾಯವನ್ನು ಆರಿಸಿಕೊಳ್ಳಬೇಕು. ಅರ್ಥಾತ್ (ಅ) ವಿಧಾನದ ಪ್ರಕಾರ, ಆಯುರ್ದಾಯವು ಮಧ್ಯಮ.

**ವಿಧಾನ (ಇ)** (ಅಂಕ 110)

ಲಗ್ನದಿಂದ ಅಷ್ಟಮಾಧಿಪತಿ ಶುಕ್ರ. ಸಪ್ತಮದಿಂದ ಅಷ್ಟಮಾಧಿಪತಿ ಕುಜ. ಈ ಪ್ರಕರಣದಲ್ಲಿ ಇಬ್ಬರ ಪೈಕಿ ಯಾರು ಹೆಚ್ಚು ಪ್ರಬಲರು ಎಂಬ ಪ್ರಶ್ನೆಯೇ ಏಳುವುದಿಲ್ಲ. ಶುಕ್ರ ಕುಜರಿಬ್ಬರೂ ಕೇಂದ್ರದಲ್ಲಿರುವ ಕಾರಣ, ಪೂರ್ಣಾಯುರ್ದಾಯವುಂಟಾಗಬೇಕು.

**ವಿಧಾನ (ಉ)** (ಅಂಕ 111)

ಸಂಬಂಧಪಟ್ಟ ಗ್ರಹಗಳು ಕುಜ ಮತ್ತು ಶುಕ್ರ. ಇ ವಿಧಾನವನ್ನೇ ಇದು ಸಮರ್ಥಿಸುತ್ತದೆ.

**ಈ ರೀತಿ, ಅ** ಪ್ರಕಾರ ಮಧ್ಯಾಯು, **ಇ** ಮತ್ತು **ಉ** ಪ್ರಕಾರ ಪೂರ್ಣಾಯುರ್ದಾಯ ಉಂಟಾಗಬೇಕು. ಆದ ಕಾರಣ ಕುಂಡಲಿಯು ಪೂರ್ಣಾಯುರ್ದಾಯದ್ದು. ಆಯುರ್ದಾಯ ನಿರ್ಣಯದಲ್ಲಿ ಮುಂದಿನ ಹೆಜ್ಜೆ ಮೇಲೆ

ಸೂಚಿತವಾದ ಆಯುರ್ದಾಯಕ್ಕೆ ಹೆಚ್ಚು ಕಡಿಮೆ ಉಂಟಾಗುತ್ತವೆಯೆ ನೋಡುವುದು ಕಕ್ಷಹ್ರಾಸ ಕಕ್ಷವೃದ್ಧಿ (ಅಂಕ 113) ನಿರ್ಧರಿಸುವುದು.

**ಕಕ್ಷವೃದ್ಧಿ**

| | |
|---|---|
| ಸಪ್ತಮದಿಂದ ತ್ರಿಕೋಣದಲ್ಲಿ ಶುಭಗಳಿದ್ದಾರೆ | = 1 |
| ಆತ್ಮಕಾರಕನಿಂದ ತ್ರಿಕೋಣದಲ್ಲಿ ಶುಭಗಳಿದ್ದಾರೆ | = 1 |
| | 2 ಅಂಕಗಳು |

**ಕಕ್ಷಹ್ರಾಸ**

| | |
|---|---|
| ಅಷ್ಟಮಾಧಿಪತಿ ಆತ್ಮಕಾರಕನಾಗುತ್ತಾನೆ | = 1 |
| ಸಪ್ತಮದಿಂದ ಅಷ್ಟಮದ ಅಧಿಪತಿ ಆತ್ಮಕಾರಕನನ್ನು ಸೇರುತ್ತಾನೆ | = 1 |
| ತ್ರಿಕೋಣದಲ್ಲಿ ಪಾಪಿಗ್ರಹ ರಾಹು ಇದ್ದಾನೆ | = 1 |
| ಆತ್ಮಕಾರಕನಿಂದ ಸಪ್ತಮಕ್ಕೆ ತ್ರಿಕೋಣದಲ್ಲಿ ಪಾಪಿಗ್ರಹ ರಾಹು ಇದ್ದಾನೆ | = 1 |
| | 4 ಅಂಕಗಳು |

ಮೊದಲ ಪರಿಶೀಲನೆಯಲ್ಲಿ ಪೂರ್ಣಾಯು ವ್ಯಕ್ತವಾದರೂ ಕಕ್ಷವೃದ್ಧಿಗಿಂತ ಕಕ್ಷಹ್ರಾಸಕ್ಕೆ ಹೆಚ್ಚು ಸಂಜ್ಞೆಗಳು ಕಾಣಬರುತ್ತವೆ. ಪರಿಣಾಮವಾಗಿ ಕುಂಡಲಿಯು ಮಧ್ಯಮಾಯುವಿನದಾಗುತ್ತದೆ. ಆತ್ಮಕಾರಕನಿಂದ ತ್ರಿಕೋಣದಲ್ಲಿ ಪೂರ್ಣ ಚಂದ್ರನಿರುವ ಕಾರಣ ಒಂದು ರಾಶಿ ದಶೆಯು ಹೆಚ್ಚಾಗುವುದನ್ನು ಗಮನಿಸತಕ್ಕದ್ದು (ಅಂಕ 117ನ್ನು ನೋಡಿ).

## 156. ಸಾವಿನ ಕಾಲ

ಲಗ್ನದಿಂದ ಅಥವಾ ಆತ್ಮಕಾರಕನಿಂದ ಸಪ್ತಮದಲ್ಲಿ ರಾಹು ಕೇತು ಅಥವಾ ಶನಿ ಇದ್ದರೆ, ಜಾತಕನು ಪಡೆದು ಬಂದಿರುವ ಆಯುರ್ದಾಯದ ಪ್ರಥಮ ದ್ವಿತೀಯ ಅಥವಾ ತೃತೀಯ ವಿಭಾಗಗಳಲ್ಲಿ ಮರಣವುಂಟಾಗುತ್ತದೆ. ಸಾವುಂಟಾಗುವುದು ಸಾಧಾರಣವಾಗಿ (1) ಅಷ್ಟಮಕ್ಕೆ ತ್ರಿಕೋಣವಾದ ರಾಶಿಗಳಲ್ಲಿ, (2) ಪಾಪಕರ್ತರಿ ಯೋಗಕ್ಕೆ ಗುರಿಯಾದ ರಾಶಿಗಳಲ್ಲಿ, (3) ಅಷ್ಟಮಾ

ದ್ವಾದಶಗಳಲ್ಲಿ ಪಾಪಿಗಳನ್ನು ಪಡೆದ ರಾಶಿಗಳಲ್ಲಿ, (4) ಚಂದ್ರ ಶುಕ್ರರನ್ನು ವಿನಾಯಿಸಿ ಉಳಿದ ಗ್ರಹಗಳ ವೀಕ್ಷಣಕ್ಕೆ ಒಳಪಡದಂಥ ಅಷ್ಟಮ ದ್ವಾದಶ ರಾಶಿಗಳಲ್ಲಿ ಮತ್ತು (5) ರುದ್ರ ಮಹೇಶ್ವರರ ರಾಶಿಗಳಲ್ಲಿ ಮತ್ತು ಆಯುಃ ಪರಿಮಿತಿಯ ಒಳಗೆ ನಡೆಯುವ ದಶೆಗೆ ಸೇರಿದ್ದ ರಾಶಿಯಾಗಬೇಕು ; ಅಂಥ **ಆಯ್ಕೆಯಾದ ರಾಶಿ.**

ಐವತ್ತನಾಲ್ಕನೆಯ ಉದಾಹರಣೆ : **ಹಿಟ್ಲರನ ಜಾತಕದಲ್ಲಿ ಮಾರಕ ಕಾಲವನ್ನು ನಿಷ್ಕರ್ಷಿಸಿ.**

ಜಾತಕನಿಗೆ ಮಾರಕವಾಗಬಲ್ಲ ರಾಶಿಗಳನ್ನು ಅವಲೋಕಿಸಿದರೆ, ಮುಂದೆ ಸೂಚಿಸಿರುವ ರಾಶಿಗಳು ಮಾರಕವಾಗಲು ತಕ್ಕವಾಗಿ ತೋರುತ್ತವೆ.

ಅಂಕ 120 (ಇ) ವೃಷಭ, ಕನ್ಯಾ ಮತ್ತು ಮಕರ.

(6) ವೃಷಭವು ಪಾಪಿಗಳ ನಡುವೆ ಇದೆ. ಆದಕಾರಣ ಅದು ಮಾರಕ ರಾಶಿ.

(7) ಅಷ್ಟಮ ದ್ವಾದಶಗಳು ಕ್ರಮವಾಗಿ ವೃಷಭ ಕನ್ಯಾ ರಾಶಿಗಳು. ಈ ಪೈಕಿ ಕನ್ಯಾ ರಾಶಿದಶೆಯು ತ್ಯಾಜ್ಯ. ಯಾವ ವಿಧಾನವನ್ನು ಅವಲಂಬಿಸಿದರೂ ಅದು ಪೂರ್ಣಾಯು ವಿಭಾಗಕ್ಕೇ ಸೇರುತ್ತದೆ. ಮಿಕ್ಕ ವೃಷಭ ರಾಶಿಯೂ ತ್ಯಾಜ್ಯವಾಗುತ್ತದೆ ; ಅದಕ್ಕೆ ಶನಿದೃಷ್ಟಿ ಬೀಳುತ್ತದೆ.

(8) ಶನಿಯು ಚಂದ್ರನಿಂದ ಅಷ್ಟಮದಲ್ಲಿದ್ದಾನೆ. ಆದಕಾರಣ ಸಾವು ಒಂದು ದಶೆ ಮುಂಚಿತವಾಗಿ ಸಂಭವಿಸಬಹುದು.

(9) ವೃಶ್ಚಿಕವೂ ತ್ಯಾಜ್ಯ.

(10) ಮೇಷ—ಮಹೇಶ್ವರ ಇದ್ದಾನೆ.

(11) ಮೇಷ —ರುದ್ರ ಇದ್ದಾನೆ.

(12) ಆತ್ಮಕಾರಕನಿಂದ ತೃತೀಯ ಷಷ್ಠ ಅಷ್ಟಮ ದ್ವಾದಶಗಳ ಅಧಿಪತಿಗಳು ಬುಧ, ಕುಜ, ಗುರು. ಬಾಕಿ ಇಬ್ಬರಿಗಿಂತ (ಅಂಕ 58) ಕುಜನೇ ಪ್ರಬಲತರ. ಅವನಿರುವ ರಾಶಿಯಾದ ಮೇಷವು ತಕ್ಕುದಾಗುತ್ತದೆ.

ಮೇಲಿನ ವಿವೇಚನೆಯ ಪ್ರಕಾರ, ಮೇಷಕ್ಕೆ ಪ್ರಾಧಾನ್ಯ ತುಂಬ ಹೆಚ್ಚು. ತರುವಾಯ ವೃಷಭ. ಮೇಷವೇ ಮಾರಕ ರಾಶಿ ಎಂದು ಅಂತಿಮ ತೀರ್ಮಾನ ಮಾಡುವುದಕ್ಕೆ ಮುಂಚೆ, ಅಂಕ 146 ಈ ಬಗೆಗೆ ಏನು ಹೇಳುತ್ತದೆಯೋ ನೋಡೋಣ. ಇಲ್ಲಿ ಶೂಲದಶೆಯು ಅನ್ವಯವಾಗುತ್ತದೆ. ಲಗ್ನ ಸಪ್ತಮಗಳಲ್ಲಿ ಯಾವುದು ಪ್ರಬಲವೋ ಅದರಿಂದ ತ್ರಿಕೋಣವಾಗುವ ರಾಶಿಗಳು

ಸೂಕ್ಷ್ಮ ರಾಶಿಗಳಾಗುತ್ತವೆ. ಪ್ರಸಕ್ತದಲ್ಲಿ, ಸಪ್ತಮವಾದ ಮೇಷವು ಲಗ್ನಕ್ಕಿಂತ ಪ್ರಬಲವಲ್ಲದೆ, ಅದರ ತ್ರಿಕೋಣಗಳ ಪೈಕಿ ಪ್ರಬಲತಮವೂ ಆಗಿದೆ. ಸ್ವಾಭಾವಿಕವಾಗಿಯೇ ನಾವು ಜಾತಕನ ಮರಣವನ್ನು ಮೇಷ ರಾಶಿಯ ದಶೆಯಲ್ಲಿ ನಿರೀಕ್ಷಿಸಬಹುದಾಗುತ್ತದೆ. ನಿರ್ಯಾಣ ಶೂಲ ದಶೆಯ ಪ್ರಕಾರ, ಮೇಷ ರಾಶಿಯ ದಶೆಯು ಹಿಟ್ಲರನ 55 ವರ್ಷದೊಡನೆ ಪ್ರಾರಂಭವಾಗುತ್ತದೆ ; 64ನೆಯ ವರ್ಷದ ತನಕ ನಡೆಯುತ್ತದೆ.

ಈ ಒಂಬತ್ತು ವರ್ಷಗಳಲ್ಲಿ ಯಾವುದು ವಿಷಮ ಕಾಲ ಎಂದು ನೋಡುವ. ನಾವು ಆತ್ಮಕಾರಕ (ಶುಕ್ರ)ನಿಂದ ಷಷ್ಠ ದ್ವಿತೀಯ ದ್ವಾದಶಗಳ ಅಧಿಪತಿಗಳ ಪೈಕಿ ಪ್ರಬಲತಮವಾದ ಗ್ರಹದ ಭುಕ್ತಿಯಲ್ಲಿ ಅಥವಾ ರುದ್ರ ನಿರುವ ರಾಶಿ (ಮೇಷ)ಯಲ್ಲಿ ಅಥವಾ ಮಾರಕ ರಾಶಿಯಿಂದ ಷಷ್ಠಾಧಿಪತಿ ಯಿರುವ ನವಾಂಶ ರಾಶಿಯ ಉಪದಶಾ ಕಾಲದಲ್ಲಿ (ವೃಷಭ—ಮೇಷದಿಂದ ಷಷ್ಠಾಧಿಪತಿ ಬುಧನು ವೃಷಭ ನವಾಂಶದಲ್ಲಿದ್ದಾನೆ) ಉಂಟಾಗುತ್ತದೆಂದು ಹೇಳುತ್ತಾರೆ. ಅಂದರೆ ಮೇಷ ವೃಷಭಗಳ ಉಪದಶಾವಧಿಗಳು ವಿಷಮ ಕಾಲ ಅಂದಹಾಗಾಯಿತು. ಹಿಟ್ಲರನು ತನ್ನ 56ನೆಯ ವಯಸ್ಸಿನಲ್ಲಿ ವೃಷಭದ ಉಪದಶೆ ನಡೆಯುತ್ತಿದ್ದಾಗ ಸತ್ತ.

## 157. ಜಾತಕದ ಬಗೆಗೆ ತೀರ್ಮಾನ

ಕಾರಕಾಂಶ ನವಾಂಶ ವರ್ಣದ ಲಗ್ನಾಧಿಪತಿಗಳು ವ್ಯಕ್ತಿಯ ರೂಪವನ್ನು ನಿರ್ಧರಿಸುತ್ತಾರಾದರೆ, ಅವನ ಮನಸ್ಸು ಶೀಲಗಳನ್ನು ಕಾರಕಾಂಶದ ಅಪೇಕ್ಷ್ಯ ಗ್ರಹಪರಿಸ್ಥಿತಿಗಳು ವಿಶೇಷವಾಗಿ ತಿಳಿಯಪಡಿಸುತ್ತವೆ. ಧನ ಯೋಗಗಳು ಆರೂಢ ಲಗ್ನಕ್ಕೆ ಅನ್ವಯವಾದವು. ಧನಯೋಗದ ಉತ್ಕೃಷ್ಟ ಲಕ್ಷಣ ಯಾವುದೆಂದರೆ ಆತ್ಮಕಾರಕನಿಗೂ ಅವನಿಂದ ದ್ವಿತೀಯಾಧಿಪತಿಗೂ ದೃಷ್ಟಿ ಅಥವಾ ಸಂಬಂಧ ಏರ್ಪಡುವುದು.

ಕಾರಕಾಂಶದಲ್ಲಿ ಉದಯವಾಗುವ ಅಥವಾ ಕಾರಕಾಂಶವನ್ನು ವೀಕ್ಷಿಸುವ ವಿವಿಧ ಗ್ರಹಗಳು ಜಾತಕನಿಗೆ ಒದಗಬಹುದಾದ ವಿವಿಧ ತೊಂದರೆಗಳನ್ನೂ ಅಪಾಯಗಳನ್ನೂ ಸೂಚಿಸುತ್ತವೆ. ಉದಾಹರಣೆಗೆ, ಮೇಷ ಕಾರಕಾಂಶವು ಚಿಕ್ಕ ಇಲಿಗಳಿಂದ ಭೀತಿ ಉಂಟಾಗುವುದನ್ನು ಸೂಚಿಸುತ್ತದೆ. ಕಾರಕಾಂಶವು ಧನುಸ್ ಆದರೆ ವಾಹನಗಳಿಂದ ಅಪಘಾತಗಳೂ, ಎತ್ತರ ಸ್ಥಳಗಳಿಂದ ಬೀಳುವುದು ಮುಂತಾದವು ಸಂಭವಿಸುತ್ತವೆ. ಕಾರಕಾಂಶದಿಂದ ವಿವಿಧ ಸನ್ನಿವೇಶ

ಗಳಲ್ಲಿ ಕುಜ, ರಾಹು, ಕೇತುಗಳಿದ್ದಂತೆಲ್ಲ ವ್ಯಕ್ತಿ ಅನುಭವಿಸಬಹುದಾದ ವಿವಿಧ ರೋಗಗಳು ವ್ಯಕ್ತಪಡುತ್ತವೆ.

ಶಿಕ್ಷಣ ಸಾಧ್ಯತೆಗಳನ್ನೂ ಕಾರಕಾಂಶದ ಅಪೇಕ್ಷೆ ಏರ್ಪಟ್ಟಿರುವ ಗ್ರಹ ಪರಿಸ್ಥಿತಿಗಳ ಅನ್ವಯ ಪರಿಶೀಲಿಸಬಹುದು. ಸೋದರ ಸೋದರಿಯರ ಬಗ್ಗೆ ವಿವರ ತಿಳಿಯಲು ಉಪಪದವನ್ನು ಉಪಯೋಗಿಸುತ್ತಾರೆ. ಇವೆಲ್ಲವನ್ನೂ ಅಂಕ 131ರಲ್ಲಿ ವಿಶದೀಕರಿಸಿದೆ. ಹಾಗೇ ಸೋದರ ಸೋದರಿಯರ ಸಾವಿನ ಬಗೆಗೂ ಗ್ರಹಪರಿಸ್ಥಿತಿಗಳನ್ನು ಸೂಚಿಸಿದೆ. ಮದುವೆ ಸಂಬಂಧವಾದ ವ್ಯವ ಹಾರಗಳನ್ನು ತಿಳಿಯಲು ಉಪಪದವೇ ಮೂಲ. ಉಪಪದದಿಂದ ದ್ವಿತೀಯ ಸಪ್ತಮಗಳಲ್ಲಿರುವ ಶುಭಗ್ರಹ ಪಾಪಗ್ರಹಗಳು ಸಪ್ತಮ ಭಾವದ ಸಾಮಾನ್ಯ ಲಕ್ಷಣವನ್ನು ತಿಳಿಯಲು ಸುಳಿವು ಕೊಡುತ್ತವೆ. ನವಾಂಶ ಲಗ್ನದ ತ್ರಿಕೋಣ ದಲ್ಲಿ ಸೂರ್ಯನಿದ್ದರೆ, ವೈಧವ್ಯ ಸೂಚಿತ ; ಹೋರಾಲಗ್ನದಿಂದ ಅಷ್ಟಮದಲ್ಲಿ ಕೇತು ಕುಜರಿದ್ದರೂ ಅದೇ ಸಂಕೇತ. ಉಪಪದದಿಂದ ಪಂಚಮ ಏಕಾದಶಗಳು ಮಕ್ಕಳ ಸಮಾಚಾರ ತಿಳಿಸುತ್ತವೆ. ಹಾಗೇ ಮಕ್ಕಳಿಲ್ಲದಿರುವುದು, ಬಂಜೆತನ ಮುಂತಾದುವುಗಳನ್ನೂ ಸೂಚಿಸುವ ಪರಿಸ್ಥಿತಿಗಳಿವೆ.

ಜೀವನೋಪಾಯವನ್ನು ನಿರ್ಣಯಮಾಡುವ ದೃಷ್ಟಿಯಿಂದ ಜೈಮಿನಿಯ ವಿಧಾನವೇ ವಿಶಿಷ್ಟ್ಯಕವಾದುದು. ಇಲ್ಲಿ ಪರಿಶೋಧನೆಗೂ ಪರಿಶೀಲನೆಗೂ ವಿಪುಲವಾದ ಅವಕಾಶವಿದೆ. ವೃತ್ತಿಯನ್ನು ಅಥವಾ ಜೀವ ನೋಪಾಯವನ್ನು ನಿಷ್ಕರ್ಷಿಸಲು ಮುಖ್ಯವಾದ ಗಣನೆಯೆಂದರೆ ಕಾರಕಾಂಶದ ಸ್ಥಾನ ಮತ್ತು ಅದರಿಂದ ಕೆಲವು ಭಾವಗಳಲ್ಲಿ ಗ್ರಹಗಳ ಸನ್ನಿವೇಶ.

ಸಾವಿನ ಬಗೆಯನ್ನು ಸಾಮಾನ್ಯವಾಗಿ ಲಗ್ನದಿಂದಲೋ ಆತ್ಮಕಾರಕ ನಿಂದಲೋ ತೃತೀಯ ಭಾವವು ತಿಳಿಸುತ್ತದೆ. ತೃತೀಯದಲ್ಲಿ ವಿವಿಧ ಗ್ರಹ ಗಳಿದ್ದರೆ ಸಾವಿನ ವಿವಿಧ ಬಗೆಗಳನ್ನು ಅವು ತಿಳಿಸುತ್ತವೆ. ಒಳ್ಳೆ ಗ್ರಹಗಳು ಒಳ್ಳೆ ಸಾವನ್ನು ಕೊಟ್ಟರೆ, ಕೆಟ್ಟ ಗ್ರಹಗಳು ಕ್ರೂರವಾದ ಸಾವನ್ನು ಕೊಡುತ್ತವೆ. 140 ಮತ್ತು 141 ನೆಯ ಅಂಕಗಳು ಪರೋಪಕಾರ, ದಾನ, ಭಕ್ತಿ, ಮೋಕ್ಷ, ಅನುಕಂಪ ಮುಂತಾದುವನ್ನು ಸೂಚಿಸುವ ಗ್ರಹಸ್ಥಿತಿಗಳಿಗೆ ಅನ್ವಯವಾಗು ತ್ತವೆ.

ಐವತ್ತೈದನೆಯ ಉದಾಹರಣೆ : **ಹಿಟ್ಲರನ ಸಾವಿನ ಬಗೆಯನ್ನು ನಿರ್ಧರಿಸಿ.**

ಜೈಮಿನಿಯ ಪ್ರಕಾರ, ಸಾವಿನ ಬಗೆಯನ್ನು ಲಗ್ನದಿಂದಲೋ ಆತ್ಮಕಾರಕ

ನಿಂದಲೋ ತೃತೀಯವಾದ ಭಾವದಿಂದ ನಿರ್ಣಯ ಮಾಡಬೇಕು. ತೃತೀಯ ದಲ್ಲಿ ಪಾಪಿಗಳಿದ್ದರೆ, ಹಿಂಸಾತ್ಮಕವಾದ ಸಾವು ಸೂಚಿತವಾಗುತ್ತದೆ, ಶುಭ ಶಾಂತಿ ಯುತವಾದ ಅಂತ್ಯವನ್ನು ಸೂಚಿಸುತ್ತಾರೆ. ಇಲ್ಲಿ ಆತ್ಮಕಾರಕನಿಂದ ತೃತೀಯ ದಲ್ಲಿ ರಾಹುವಿದ್ದಾನೆ. ಲಗ್ನದಿಂದ ತೃತೀಯದಲ್ಲಿ ಚಂದ್ರ, ಗುರು ಕೇತುಗಳಿ ದ್ದಾರೆ. ಆತ್ಮಕಾರಕ ಮತ್ತು ಲಗ್ನ ಈ ಪೈಕಿ ಪ್ರಬಲತರವಾದವರನ್ನು ನಾವು ಆಯ್ಕೆ ಮಾಡಿದರೆ ಆತ್ಮಕಾರಕನೇ ಹೆಚ್ಚು ಪ್ರಬಲನಾಗಿ ಕಾಣುತ್ತಾನೆ. ಏಕೆಂದರೆ ಅವನೊಡನೆ ಮೂವರು ಗ್ರಹಗಳಿರುತ್ತಾರೆ. ಲಗ್ನಕ್ಕೆ ಯಾರ ವೀಕ್ಷಣೆಯಾಗಲಿ ಸಂಬಂಧವಾಗಲಿ ಇಲ್ಲ. ಅವಕಾರಣ ತೃತೀಯ ರಾಹುವು (ವಿಷ) ದುಃಖ ಸೂಚನೆ ಕೊಡುತ್ತಾನೆ: ಆದರೆ ಅವನ ಕ್ರೂರ ಸ್ವಭಾವವು ಚಂದ್ರ ಗುರು ದೃಷ್ಟಿಗಳಿಂದ ಶಮನವಾಗುತ್ತದೆ.

## 158. ಘಟನೆಗಳ ಕಾಲ ನಿಷ್ಕರ್ಷೆ

ಎಲ್ಲ ಘಟನೆಗಳನ್ನೂ ಚರದಶೆಯಿಂದ ಮುನ್ನುಡಿಯಬಹುದಾದರೂ ಸ್ಥಿರದಶೆ ನಿರ್ಯಾಣ ಶೂಲದಶೆಗಳು ಮರಣ ಸಂಬಂಧಿಯಾದ ವಿಷಯಗಳ ಬಗೆಗೆ ಉಪಯುಕ್ತವಾಗುತ್ತವೆ. ಸಾಧಾರಣವಾಗಿ ಒಂದು ರಾಶಿಯು ಪ್ರಬಲ ವಾಗಿದ್ದರೆ, ಮತ್ತು ಇಕ್ಕೆಲಗಳಲ್ಲೂ ಪಾಪಿಗ್ರಹಗಳನ್ನು ಪಡೆಯದೆ ಇದ್ದರೆ ಅಥವಾ ಷಷ್ಠ ದ್ವಾದಶಗಳಲ್ಲಿ ಪಾಪಿಗಳಿಲ್ಲದಿದ್ದರೆ, ತನ್ನ ದಶಾ ಕಾಲದಲ್ಲಿ ಒಳ್ಳೆಯ ಫಲ ಕೊಡುತ್ತದೆ. ರಾಶಿ ದಶೆಯು ಕೊಡುವ ಫಲದ ಸ್ವರೂಪವು ಲಗ್ನದಿಂದಲೋ ಆತ್ಮಕಾರಕನಿಂದಲೋ ಕಡೆಗೆ ಕಾರಕಾಂಶದಿಂದಲೋ ಯಾವ ಭಾವವನ್ನು ಆ ರಾಶಿಯು ಪ್ರತಿನಿಧಿಸುತ್ತದೋ ಅದಕ್ಕೆ ಸಂಬಂಧಪಟ್ಟುದಾಗಿರು ತ್ತದೆ. ತಂದೆಯ ಸಾವನ್ನು ಚರದಶಾ ವಿಧಾನದ ಮೇರೆಗೆ (ಅಂಕ 144) ಸ್ಥಿರರಾಶಿಗಳ ದಶೆಗಳಲ್ಲೋ ಅಥವಾ ನಿರ್ಯಾಣ ಶೂಲ ದಶೆಯ ಪ್ರಕಾರ ಸ್ಥಿರರಾಶಿಗಳಲ್ಲೋ ಮುನ್ನುಡಿಯಬಹುದು. ಅದೇ ರೀತಿ ಈ ಎರಡು ದಶೆ ಗಳ ನೆರವಿನಿಂದ ತಾಯಿ, ಸೋದರರು, ಮಕ್ಕಳು ಮುಂತಾದವರ ಸಾವಿನ ಕಾಲ ವನ್ನೂ ಗೊತ್ತುಹಚ್ಚಬಹುದು. ಅಂಕ 146ರಲ್ಲಿ ಸೂಚಿಸಿರುವ ಆಧಾರದ ಮೇಲೆ ಜಾತಕನ ಸ್ವಂತ ಸಾವನ್ನೂ ಪ್ರತೀಕ್ಷಿಸಬಹುದು.

## 159. ಯೋಗಗಳು

ಜನ್ಮ ಲಗ್ನ ಹೋರಾ ಲಗ್ನ ಘಟಿಕಾ ಲಗ್ನ ಮೂರನ್ನೂ ಏಕಕಾಲದಲ್ಲಿ ಒಂದೇ ಗ್ರಹವು ದೃಷ್ಟಿಸಿದರೆ ಪ್ರಬಲವಾದ ರಾಜಯೋಗವುಂಟಾಗುತ್ತದೆ

ಎನ್ನಬಹುದು. ಯೋಗದ ಪ್ರಾಬಲ್ಯವು ಯಾರೂ ವೀಕ್ಷಣಕ್ಕೆ ಒಳಗಾಗದೆ ಹೋದರೆ ಕುಗ್ಗುತ್ತದೆ. ಪದವಿ, ಕೀರ್ತಿ, ಪ್ರತಿಷ್ಠೆಗಳನ್ನು ಸೂಚಿಸುವ ಹಲವು ರಾಜಯೋಗಗಳನ್ನು ಕೊಟ್ಟಿದೆ. ಅಂಕ 140 ಅರಿಷ್ಟ ಯೋಗಗಳನ್ನು ವಿವರಿಸುತ್ತದೆ. ಇದು ಮತ್ತೊಬ್ಬರ ಮನೆಗೆ ಬೆಂಕಿಯಿಡುವುದೇ ಮುಂತಾದ ಹೇಯ ಕೃತ್ಯಗಳಿಂದ ಹಿಡಿದು ಸೆರೆವಾಸ ಅಕ್ರಮ ರತಿವರೆಗೆ ನಾನಾ ಅಪರಾಧ ಗಳನ್ನು ಒಳಗೊಂಡಿರುತ್ತದೆ.

ಹಿಟ್ಲರನ ಕುಂಡಲಿಯನ್ನು ಬಿಡಿಸಿ ಮುನ್ನ, ಜೈಮಿನಿ ಪದ್ಧತಿಯ ಪ್ರಕಾರ ಅವನ ಕುಂಡಲಿಯ ಕೆಲವು ಪ್ರಮುಖವಾದ ಲಕ್ಷಣಗಳನ್ನು ಅವಲೋಕಿ ಸುವುದು ಅಗತ್ಯ. ಅವನ ವ್ಯಕ್ತಿತ್ವವನ್ನು ಭಾವಿಸಿದರೆ, ಕಾರಕಾಂಶದ ಸನ್ನಿವೇಶವು ಬಹುಮಟ್ಟಿಗೆ ಅವನ ದೈಹಿಕವಾದ ನಿಲುವು, ನೋಟ, ಮಾನಸಿಕ ಲಕ್ಷಣ ಮುಂತಾದವನ್ನು ಪ್ರತಿಬಿಂಬಿಸುತ್ತದೆ. ಕಾರಕಾಂಶದ ಜತೆಗೆ ಕುಜ ನೊಬ್ಬನ ಸಂಬಂಧವುಂಟಾದರೂ ಕೂಡ ಒಳ್ಳೆಯ ಯೋಧನ ಜನನವಾಗುತ್ತದೆ. ಕಾರಕಾಂಶದಲ್ಲಿ ಕುಜ ಶುಕ್ರರ ಯುತಿಯು ಅವನನ್ನು ಯೋಧನ ಹಂತದಿಂದ ಪ್ರಭುವಿನ, ಸೇನಾನಿಯ ಅಂತಸ್ತಿಗೆ ಒಯ್ದಿತ್ತು. ಆದರೆ ಕಾರಕಾಂಶದಲ್ಲಿ ಕೇತುವಿರುವುದು ಅಪೇಕ್ಷಣೀಯವಲ್ಲ. ಪ್ರಯೋಗಿಸುವ ವಿಧಾನಗಳು ಪ್ರಶ್ನಾರ್ಹ ವಾಗುತ್ತವೆ—ದ್ರೋಹ ದೋಷಗಳಿಂದ ಕೂಡಿರುತ್ತವೆ. ಪ್ರಥಮಾಧಿಪತಿ ಯಿಂದಲೂ ಸಪ್ತಮಾಧಿಪತಿ (ರಾಹು) ಯಿಂದಲೂ ಕೆಲವು ಪ್ರಮುಖವಾದ ರಾಜಯೋಗಗಳನ್ನು ಮುಂದೆ ಮಂಡಿಸಿದೆ.

ಜನ್ಮ ಲಗ್ನ ದ್ರೇಕ್ಕಾಣ ಲಗ್ನಗಳಿಂದ ಸಪ್ತಮದಲ್ಲಿ ನಾಲ್ಕು ಗ್ರಹಗಳು, ನವಾಂಶ ಲಗ್ನದಲ್ಲಿ ಮೂರು, ನವಾಂಶ ಲಗ್ನದಿಂದ ಸಪ್ತಮದಲ್ಲಿ ಎರಡು ಗ್ರಹ ಗಳು. ಆದಕಾರಣ ಆರು ಸಂಜ್ಞೆಗಳ ಪೈಕಿ ನಾಲ್ಕು ಈಡೇರುತ್ತವೆ. ತಾಂತ್ರಿಕ ವಾಗಿ ಒಂದು ಗ್ರಹವೇ (ರಾಜಯೋಗ 2) ಸಾಕಾದರೂ, ಇಲ್ಲಿ ನಾಲ್ಕು ಗ್ರಹ ಗಳಿವೆ. ಆದಕಾರಣ ಅತ್ಯಂತ ಪ್ರಬಲವಾದ ರಾಜಯೋಗ ಸಮುತ್ಪನ್ನವಾಗಿದೆ. ಜತೆಗೆ, ಆ ಯೋಗಕ್ಕೆ ಮತ್ತಷ್ಟು ಬಲವರ್ಧನವಾಗುತ್ತದೆ. ಏಕೆಂದರೆ ಜನ್ಮ ಲಗ್ನ, ದ್ರೇಕ್ಕಾಣ ಲಗ್ನ, ನವಾಂಶ ಲಗ್ನಗಳ ಅಪೇಕ್ಷ್ಯ ಭಾವಿಸಿದರೂ ಅವು ನಾಲ್ಕು ಗ್ರಹಗಳೇ ಈ ರಾಜಯೋಗವನ್ನುಂಟುಮಾಡುತ್ತವೆ.

ಶನಿ, ಕುಜ ಮತ್ತು ಚಂದ್ರ ಇವರಿಂದ ಜನ್ಮ ಲಗ್ನ, ಘಟಿಕಾ ಲಗ್ನ ಹೋರಾ ಲಗ್ನಗಳಿಗೆ ದೃಷ್ಟಿ ಬೀಳುವ ಕಾರಣ ಮತ್ತೊಂದು ಪ್ರಬಲವಾದ ರಾಜಯೋಗವುಂಟಾಗುತ್ತದೆ.

ಕುಜ ಶುಕ್ರ ಕೇತುಗಳು ಪರಸ್ಪರ ವೀಕ್ಷಿಸಿದರೆ, ರಾಜಯೋಗವು ಉತ್ಪನ್ನವಾಗುತ್ತದೆ ಎನ್ನುತ್ತಾರೆ. ಈ ಕುಂಡಲಿಯಲ್ಲಿ ಈ ಗ್ರಹಗಳು ಪರಸ್ಪರ ವೀಕ್ಷಣವಲ್ಲೇ ಇಲ್ಲವಾದರೂ, ಪರಸ್ಪರ ಯುತಿ ಇದೆ. ಆತ್ಮಕಾರಕನೊಡನೆ ಉಚ್ಚ ಸೂರ್ಯನಿದ್ದರೆ, ಅದೇ ಒಂದು ರಾಜಯೋಗ. ಒಂದು ಗಮನಾರ್ಹವಾದ ಲಕ್ಷಣವೆಂದರೆ ಈ ಎಲ್ಲಾ ರಾಜಯೋಗಗಳೂ ಮೇಷ ರಾಶಿಗೇ ಅನ್ವಯವಾದವು ಅಂದರೆ ಮೇಷ ರಾಶಿಯು ಈ ಜಾತಕದ ತಿರುಗಣೆ. ಅದರ ಮೇಲೆ ಕೇಂದ್ರೀಕೃತವಾಗಿರುವ ಪ್ರಭಾವಗಳು ತುಂಬ ಪ್ರಬಲವೇ ಆಗಿವೆ. ಅವನ 41ನೆಯ ವಯಸ್ಸಿನಲ್ಲಿ ಮೇಷ ರಾಶಿಯ ಚರದಶೆಯು ಪ್ರಾರಂಭವಾಯಿತು. ನಾವು ಮುಂಚೆಯೇ ಹೇಳಿರುವಂತೆ ಜೀವನದ ಘಟನೆಗಳ ಕಾಲವನ್ನು ನಿಷ್ಕರ್ಷಿಸಲು ಚರದಶೆಯೇ ಜೈಮಿನಿಗೆ ತುಂಬ ಮೆಚ್ಚು. ಚರದಶೆ 12 ವರ್ಷ ಕಾಲ ನಡೆಯಿತು. ಈ ಅವಧಿಯಲ್ಲೇ ಹಿಟ್ಲರ್ ಪದವಿ ಸೇರಿದ. ಜರ್ಮನಿಯು ಪ್ರಥಮ ಲೋಕ ಯುದ್ಧದಲ್ಲಿ ತನಗಾದ ಕೆಡಕುಗಳನ್ನು ತೊಡೆದುಹಾಕಿತು.



# ನಮ್ಮ ಪ್ರಕಟಣೆಗಳು

**Books on Astrology**

| | Title | Author | Price |
|---|---|---|---|
| | ಜೈಮಿನಿ ಜ್ಯೋತಿಷ | ಡಾ. ಬಿ. ವಿ. ರಾಮನ್ | 7–50 |
| | ಪ್ರಶ್ನತಂತ್ರ | " | 12–50 |
| | ಆರಂಭ ಜ್ಯೋತಿಷ್ಯ | " | 7–50 |
| | ಜ್ಯೋತಿಷ ಕೈಪಿಡಿ | " | 9–00 |
| 1. | Graha and Bhava Balas | Dr. B. V. Raman | 10–00 |
| 2. | Muhurtha or Electional Astrology | ,, | 20–00 |
| 3. | Planetary Influences on Human Affairs | | 15–00 |
| 4. | Ayurveda | | 3–00 |
| 5. | Ashtakavarga System of Prediction | | 25–00 |
| 6. | Prasna Marga (Vol. I) | | (in press) |
| 7. | Prasna Marga (Vol. II) | | 45–00 |
| 8. | 110 Years Ephemeris of Planetary Positions (1891 to 2000 A.D.) | | 50–00 |
| 9. | How to Judge a Horoscope (Vol. I) | | (in press) |
| 10. | How to Judge a Horoscope (Vol. II) | | 50–00 |
| 11. | Notable Horoscopes | | 40–00 |
| 12. | A Catechism of Astrology (Vol. I) | | (in press) |
| 13. | A Catechism of Astrology (Vol. II) | | 9–00 |
| 14. | Hindu Predictive Astrology | | 40–00 |
| 15. | Varshaphal | | 15–00 |
| 16. | Bhavartha Ratnakara | | 22–00 |
| 17. | A Manual of Hindu Astrology | | 25–00 |